|| ಶ್ರೀ ||

ಕೀರ್ತನಕಂಠಾಭರಣ — ನಾಲ್ಕನೆಯ ಭಾಗ

# ಕೆಲವು ಉಪಾಖ್ಯಾನಗಳು

प्रह्लादस्तालधारी, तरलगतितया चोद्धवः कांस्यधारी,




वीणाधारी सुरर्षिः, स्वरकुशलतया रागकर्ताऽर्जुनोऽभूत् ।

इन्द्रोऽवादीन्मृदङ्गं, जयजयसुकराः कीर्तयन्ते कुमाराः

यत्राग्रे भाववक्ता सरस-रचनया व्यासपुत्रो बभूव ॥

— ಹೊಸಕೆರೆ ಚಿದಂಬರಯ್ಯ —

ಶ್ರೀ

ಕೀರ್ತನಕಂಠಾಭರಣ — ನಾಲ್ಕನೆಯ ಭಾಗ

# ಕೆಲವು ಉಪಾಖ್ಯಾನಗಳು


ಲೇಖಕ

ಹೊಸಕೆರೆ ಚಿದಂಬರಯ್ಯ

ಭಕ್ತಬಂಧುಕಾರ್ಯಾಲಯ, ಬಸವನಗುಡಿ, ಬೆಂಗಳೂರು ಸಿಟಿ



ಪ್ರಕಾಶಕ

ಮಂಚಲದೊರೆ ರಾಮರಾವ್

ಎಸ್. ಎಸ್. ಎನ್. ಬುಕ್ ಡಿಪೊ, ಬಸವನಗುಡಿ, ಬೆಂಗಳೂರು ಸಿಟಿ



ಮೊದಲನೆ ಮುದ್ರಣ ೧,೦೦೦ ಪ್ರತಿಗಳು



ಬಿ. ಬಿ. ಡಿ. ಪವರ್ ಪ್ರೆಸ್,

ಅರಳೇಪೇಟೆ, - - ಬೆಂಗಳೂರು ಸಿಟಿ

ಶಾ. ಶ. ೧೮೬೩] ಬೆಲೆ ೧ ರೂ. [ಕ್ರಿ. ಶ. ೧೯೪೧

# ವಿಷಯಕ್ರಮ

# ಮುನ್ನುಡಿ

"ಭಾಗವತದ ಕೆಲವು ಕಥೆಗಳು" ಎಂಬ ಭಾಗದಲ್ಲಿ ಬರೆದಿರುವ ಮುನ್ನುಡಿಯೇ ಇದಕ್ಕೂ ಅನ್ವಯಿಸುತ್ತದೆ. ಇಲ್ಲಿ ಹೆಚ್ಚಾಗಿ ಹೇಳಬೇಕಾದ್ದೇನೂ ಇಲ್ಲ. ಈ ಭಾಗದಲ್ಲಿ ಮೊದಲನೆಯದಾಗಿರುವ 'ಗಣಪತಿಯ ವಿಜಯಯಾತ್ರೆ'ಯು 'ಗಣಪತಿಸ್ವಯಂವರ'ವೆಂಬ ಹೆಸರಿನಿಂದ ನಾನು ಎಲ್ಲಕ್ಕೂ ಮೊದಲು ಬರೆದ ಕಥೆ. ಈ ಕಥೆಯ ೮ನೆ ಪುಟದಲ್ಲಿ ಮಯೂರೇಶನೆಂಬ ಬಂದಿದೆ. ಗಣಪತಿಯು ಮಯೂರ (ಮೋರಾಯ) ನೆಂಬ ಭಕ್ತನ ಉಪಾಸ್ಯದೇವತೆಯಾದ್ದರಿಂದ ಮತ್ತು ಮಯೂರ (ಮೋರಗಾಂ) ಎಂಬ ಕ್ಷೇತ್ರದ ಅಧಿನಾಯಕನಾದ್ದರಿಂದ ಅವನಿಗೆ ಮಯೂರೇಶನೆಂಬ ಹೆಸರು ಬಂದಿದೆ. ಮಹಾರಾಷ್ಟ್ರದಲ್ಲಿ ಈ ಹೆಸರಿನ ಅಪಭ್ರಂಶವನ್ನು ಗಣಪತಿಯ ಹೆಸರಿಗೆ ಸೇರಿಸಿ 'ಗಣಪತಿ-ಮೋರೆಯ' ಎಂದು ಕೂಗುವ ಸಂಪ್ರದಾಯವಿದೆ. ಹಿಂದಿನ ಭಾಗಗಳಲ್ಲಿ ಹೇಗೊ ಹಾಗೆ ಈ ಭಾಗದಲ್ಲಿರುವ ಹಾಡುಗಳ ರಾಗತಾಳಗಳ ವಿಷಯಕ್ಕೂ ಶ್ರೀಯುತ ಸೂಲಕುಂಟೆ ಹನುಮಂತರಾಯರ ನೆರವನ್ನು ಕೃತಜ್ಞತಾಪೂರ್ವಕವಾಗಿ ಉಪಯೋಗ ಮಾಡಿಕೊಂಡಿದ್ದೇನೆ.

ಬೆಂಗಳೂರು,
ಪ್ರಜೋತ್ಪತ್ತಿ-ಮಾರ್ಗಶಿರ ಶು|| ೧೧.

**ಹೊಸಕೆರೆ ಚಿದಂಬರಯ್ಯ.**

---

## ಸಂಜ್ಞೆಗಳ ವಿವರಣೆ

ಸಾಲುಗಳ ಮೊದಲಲ್ಲಿ ಉಪಯೋಗಿಸಿರುವವು

| | | | | | |
|---|---|---|---|---|---|
| ಅ | ಅರ್ಥ | ತ್ರಿ | ತ್ರಿಪದಿ | ವೃ | ವೃತ್ತ |
| ಆ | ಆರ್ಯಾ | ದಿಂ | ದಿಂಡಿ | ಶ | ಶರಷಟ್ಪದಿ |
| ಕೀ | ಕೀರ್ತನಕಾರರ ಆರ್ಯಾ | ಭಾ | ಭಾಮಿನೀಷಟ್ಪದಿ | ಶ್ಲೋ | ಶ್ಲೋಕ |
| ಕು | ಕುಸುಮಷಟ್ಪದಿ | ಭೋ | ಭೋಗಷಟ್ಪದಿ | ಸಾ | ಸಾಕಿ |
| ಕಂ | ಕಂದ | ರ | ರಗಳೆ | ಸಾಂ | ಸಾಂಗತ್ಯ |
| ಚೂ | ಚೂರ್ಣಿಕೆ | ವ | ವಚನ | ಸೀ | ಸೀಸಪದ್ಯ |
| ಚೌ | ಚೌಪದಿ | ವಾ | ವಾರ್ಧಿಕಷಟ್ಪದಿ | ಸೂ | ಸೂತ್ರ |
| ಟಿ | ಟಿಪ್ಪಣಿ | | | | |

# ಸಾಲುಗಳ ಕೊನೆಯಲ್ಲಿ ಉಪಯೋಗಿಸಿರುವವು

| | | | |
|---|---|---|---|
| ಅ. ಚ | ಅಕ್ರೂರಚರಿತ್ರೆ | ಮಾ. ಪು | ಮಾರ್ಕಂಡೇಯಪುರಾಣ |
| ಅ. ನಾ. ಪು | ಅಜಿತನಾಥಪುರಾಣ | ಮೋ. ಮು | ಮೋಹಮುದ್ಗರ |
| ಅ. ಗೀ | ಅಧ್ಯಾತ್ಮ ಗೀತಾವಳಿ | ಯೋ. ಸೂ | ಯೋಗಸೂತ್ರಗಳು |
| ಅ. ರಾ | ಅಧ್ಯಾತ್ಮ ರಾಮಾಯಣ | ರ. ಶ | ರತ್ನಾಕರಾಧೀಶ್ವರಶತಕ |
| ಅ. ಶ | ಅಪರಾಜಿತೇಶ್ವರಶತಕ | ರಾ. ವಿ | ರಾಜಶೇಖರವಿಲಾಸ |
| ಆ. ಪು | ಆದಿಪುರಾಣ | ವಿ. ಕಾ | ವಿದ್ಯಾರಣ್ಯಕಾವ್ಯ |
| ಕ. ಗು. ಚ. | ಕನ್ನಡ ಗುರುಚರಿತ್ರೆ | ವಿ. ಶ | ವಿರೂಪಾಕ್ಷಶತಕ |
| ಕ. ಭಾಗ | ಕನ್ನಡ ಭಾಗವತ | ವಿ. ಪು | ವಿಷ್ಣುಪುರಾಣ |
| ಕ. ಸಂ | ಕಲಿಸಂತರಣನಾಟಕ | ವೀ. ವ. ಶಾ | ವೀರಶೈವರ ವಚನಶಾಸ್ತ್ರ |
| ಕು. ಸಂ | ಕುಮಾರಸಂಭವ | ವೃ. ಗೀ | ವೃಷಭಗೀತೆ |
| ಕೈ. ಕ | ಕೈವಲ್ಯಕಲ್ಪವಲ್ಲರಿ | ವ್ರ. ಚೂ | ವ್ರತಚೂಡಾಮಣಿ |
| ಕೌ. ಪಂ | ಕೌಪೀನಪಂಚಕ | ಶಿ. ಗೀ | ಶಿವಗೀತೆ |
| ಗಿ. ಕ. | ಗಿರಿಜಾಕಲ್ಯಾಣ | ಶಿ. ಭ. ಸಾ | ಶಿವಭಕ್ತಿಸಾರ |
| ಗು. ಶಂ. ಶ | ಗುರುಮೂರ್ತಿಶಂಕರಶತಕ | ಶಿ. ಕ | ಶಿವರಾತ್ರಿಕಥೆ |
| ಚಂ. ಕೌ. ನಾ | ಚಂಡಕೌಶಿಕನಾಟಕ | ಶಿ. ಲ | ಶಿವಾನಂದಲಹರಿ |
| ಚಂ. ಪ್ರ. ಚ | ಚಂದ್ರಪ್ರಭಚರಿತೆ | ಶ್ರೀ. ರಾ | ಶ್ರೀಮದ್ರಾಮಾಯಣ |
| ದಾ | ದಾಸರ ಪದಗಳು | ಸ. ಶಿ. ಶ | ಸದಾಶಿವಶತಕ |
| ಧ. ಅ. | ಧರ್ಮಾಮೃತ | ಸ. ಪ. | ಸರ್ವಜ್ಞಪದಗಳು |
| ನ. ಚ | ನಳಚರಿತ್ರೆ | ಸಂ. ಭಾಗ | ಸಂಸ್ಕೃತ ಭಾಗವತ |
| ನ. ಚ. ನಾ | ನಳಚರಿತ್ರನಾಟಕ | ಸಂ. ಭಾರ | ಸಂಸ್ಕೃತ ಭಾರತ |
| ನ. ಚಂ | ನಳಚಂಪೂ | ಸಾ. ಚ | ಸಾವಿತ್ರೀಚರಿತ್ರೆ |
| ನ. ಜೋ. ಹಾ | ನಳಜೋಗೀಹಾಡು | ಸಾ. ದೃ | ಸಾವಿತ್ರೀದೃಶ್ಯ |
| ನ. ಶ. | ನಯಶತಕ | ಸಾ. ನಾ | ಸಾವಿತ್ರೀನಾಟಕಂ |
| ನಾ. ಭ. ಸೂ | ನಾರದಭಕ್ತಿಸೂತ್ರ | ಸು. ಚ | ಸುಕನ್ಯಾಚರಿತ್ರೆ |
| ನೀ. ಮಂ | ನೀತಿಮಂಜರಿ | ಸು. | ಸುಭಾಷಿತ |
| ನೀ. ಸಾ | ನೀತಿಸಾರ | ಸು. ಲಾ | ಸುಶ್ಲೋಕಲಾಘವ |
| ಪ. ಸ್ತು | ಪರಮಾತ್ಮಸ್ತುತಿ | ಸೋ. ಶ | ಸೋಮೇಶ್ವರಶತಕ |
| ಪಂ. ಭಾ | ಪಂಪಭಾರತ | ಸ್ಕಾಂ. ಪು | ಸ್ಕಾಂದಪುರಾಣ |
| ಪಾ. ಪ. ಕಾ | ಪಾರ್ವತೀಪರಿಣಯಕಾವ್ಯ | ಸ್ತ್ರೀ. ಧ. ಸಂ | ಸ್ತ್ರೀಧರ್ಮಸಂಗ್ರಹ |
| ಬಿ. ಅ | ಬಿಲ್ವಾಷ್ಟಕ | ಹ. ಧ | ಹರಿಬದೆಯ ಧರ್ಮ |
| ಭಕ್ತಿ. ಗೀ | ಭಕ್ತಿಗೀತಾವಳಿ | ಹ. ಭ. ಸಾ | ಹರಿಭಕ್ತಿಸಾರ |
| ಭ. ನೀ | ಭರ್ತೃಹರಿ ನೀತಿಶತಕ | ಹ. ಶ. | ಹರಿಶರಣಾಷ್ಟಕ |
| ಭ. ವೈ | ಭರ್ತೃಹರಿ ವೈರಾಗ್ಯಶತಕ | ಹ. ಕಾ | ಹರಿಶ್ಚಂದ್ರಕಾವ್ಯ |
| ಮ. ಉ | ಮನಸ್ಸಿಗುಪದೇಶ | ಹ. ಸಾಂ | ಹರಿಶ್ಚಂದ್ರಸಾಂಗತ್ಯ |
| ಮ. ಸ್ಮೃ | ಮನುಸ್ಮೃತಿ | ಹ. ಹಂ | ಹಣ್ಣಾದ ಹಂಬಲಿಕೆ |

॥ ಶ್ರೀಃ ॥

ಕೀರ್ತನಕಂಠಾಭರಣ ನಾಲ್ಕನೆ ಭಾಗ

# ಕೆಲವು ಉಪಾಖ್ಯಾನಗಳು

## ಗಣಪತಿಯ ವಿಜಯಯಾತ್ರೆ

### ಪೀಠಿಕೆ—ಪರೋಪಕಾರ

ಹಿಂದುಸ್ಥಾನಿ ತೋಡಿ—ಏಕತಾಳ

ಧನ್ಯನೆಂದೆನಿಸುವನು । ಪರಹಿತ । ವನ್ನು ಮಾಡುವನು ॥ ಪ ॥ ಪನ್ನಗ ಭೂಷನ ಬೆಂಬಲದಿಂ ಜನ । ರನ್ನು ರಕ್ಷಿಸುವ ಸನ್ನುತಮಹಿಮನು ॥ ಅ.ಪ. ॥ ಇಹಪರವೆರಡರ ಸುಖವು ಧರ್ಮದಿಂ । ಬಹುದೆಂಬುವ ಭರವಸದಿಂದಿರುವನು ॥ ೧ ॥ ಮುಕ್ತಿಗೆ ಧರ್ಮವೆ ಮೆಟ್ಟಿಲೆಂದದರೊಳು । ಭಕ್ತಿಯ ತಳೆದು ವಿರಕ್ತಿಯ ಪಡೆವನು ॥ ೨ ॥ ಪರಹಿತವೆಂಬುವ ಪರಮಧರ್ಮದಿಂದ । ವರಶುದ್ಧಿಸಿದ್ಧಿಯ ದೊರಕಿಸಿಕೊಳ್ವನು ॥ ೩ ॥

ಲೋಕದಲ್ಲಿ ಅಕ್ಷರವಿದ್ಯೆ ಮೊದಲಾದವುಗಳ ಬೆಲೆ ಎಷ್ಟೆಂಬದನ್ನು ಕುರಿತು ದೊಡ್ಡವರು ತಮ್ಮ ಉಪದೇಶದಲ್ಲಿ ನೆನಪುಗೊಟ್ಟಿರುವದೇನೆಂದರೆ—

ತ್ರಿ॥ ಅಕ್ಕರವು ಲೇಖಕ್ಕೆ, ತರ್ಕ ತಾ ವಾದಕ್ಕೆ । ಮಿಕ್ಕ ಓದುಗಳು ತಿರುಪೆಗೆ, ಮೋಕ್ಷಕೆರ । ಡಕ್ಕರವೆ ಸಾಕು ಸರ್ವಜ್ಞ ॥ —(ಸ. ಪ)

ಆ ಎರಡಕ್ಷರಗಳು ಯಾವವೆಂದರೆ—

ಶ್ಲೋ॥ ಶಿವಶಿವೇತಿ ಶಿವೇತಿ ಶಿವೇತಿ ವಾ । ಭವಭವೇತಿ ಭವೇತಿ ಭವೇತಿ ವಾ ॥ ಹರಹರೇತಿ ಹರೇತಿ ಹರೇತಿ ವಾ । ಭಜ ಮನಃ ಶಿವಮೇವ ನಿರಂತರಮ್ ॥ —(ಸು)

ಅ॥ ಶಿವ ಶಿವ ಎಂದಾಗಲಿ, ಭವ ಭವ ಎಂದಾಗಲಿ, ಹರ ಹರ ಎಂದಾಗಲಿ, ಎಲೋ ಮನಸ್ಸೆ ಯಾವಾಗಲೂ ಶಿವನನ್ನೆ ಭಜಿಸು.

ಮೋಕ್ಷಕ್ಕೆ ಸಮರ್ಥವಾಗುವ ಹಾಗೆ ಆ ಎರಡಕ್ಷರಗಳ ಮೇಲೆ ಲಕ್ಷ್ಯವು ಎಷ್ಟರ ಮಟ್ಟಿಗಿರಬೇಕೆಂದರೆ—

ವೃ॥ ಎಂದುಂ ಸಿವ್ಮೊಳಿಲೇ ಮಹೇಶ್ವರ ಮನಂ ಬಂದಂತೆ ಚಿಂತಿಪ್ಪ, ಕಣ್ । ಬಂದಂತೀಕ್ಷಿಪ, ಜಿಹ್ವೆ ಬಂದ ತೆರದಿಂ ಬಣ್ಣಿಪ್ಪ, ಮೆಯ್ಯುರ್ಬುತುಂ ॥ ಬಂದಂತಾಂ ಪುಳಕಿಪ್ಪ, ಕೈಗಳೆಸಸುಂ ಬಂದಂತೆ ಪೂಜಿಪ್ಪ, ಕಾಲ್ । ಬಂದಂತಾಡುವ ಸೈಪು ಸಾರ್ವುದೆನಗಿನ್ನೆಂದೋ ? ವಿರೂಪಾಕ್ಷನೇ ॥ —(ವಿ ಶ.)

ಪರಮೇಶ್ವರನೊಬ್ಬನೇ ನಮ್ಮನ್ನು ಕಾಯುವ ಸಮರ್ಥನೆಂಬ ವಿಷಯದಲ್ಲಿ ಮತ್ತೊಬ್ಬ ಕವಿ ಹೇಳಿರುವದೇನೆಂದರೆ—

ವೃ॥ ತಾಯಿಗೆ ಕಷ್ಟವೇ ಶಿಶುವ ರಕ್ಷಿಸುವಲ್ಲಿ? ಲತಾಳಿಗಾರ್ತಿಯೇ । ಕಾಯಿಗಳಾನುವಲ್ಲಿ ? ನದಿಗಳ್ ಭರದಿಂ ಪುಗಲಾತ್ಮಕುಕ್ಷಿಯೊಳ್ ॥ ನೋಯುವನೇ ಸಮುದ್ರ? ನಿಳೆಯಂ ಪೊರುವಲ್ಲಿ ಫಣೀಂದ್ರಮಸ್ತಕ । ಕ್ಕಾಯಿತು ಬಾಧೆಯೇ ? ಪೊರೆಯೆ ನೀ ಪರಮೇಶ್ವರನೈ ಸದಾಶಿವ ॥ —(ಸ. ಶಿ. ಶ.)

ಪರಮಾತ್ಮನಿಗೆ ಶರಣೆನ್ನುವದೊಂದೇ ಮುಕ್ತಿಯ ದಾರಿಯೆಂದು ಭಗವದ್ಭಕ್ತರು ಹಾಡಿರುವದೇನೆಂದರೆ—

ಸೌರಾಷ್ಟ್ರ—ಏಕತಾಳ

ಎಲ್ಲಪರು ಮಾಡುವದು ಹೊಟ್ಟೆಗಾಗಿ । ಗೇಣು ಬಟ್ಟೆಗಾಗಿ ॥ ಪ ॥ ನೆಲ್ಲುಗಳ ಕಟ್ಟಿಕೊಂಡು ಬಿದುಗಳ ಹೊತ್ತುಕೊಂಡು । ಕೂಲಿಗಳ ಮಾಡುವದು ಹೊಟ್ಟೆಗಾಗಿ । ಗೇಣು ಬಟ್ಟೆಗಾಗಿ ॥ ೧ ॥ ನಾಲ್ಕುವೇದಪುರಾಣಶಾಸ್ತ್ರಪಂಚಾಂಗಗಳ । ಹೇಳಿ ಕಾಲ ಕಳೆವುದು ಹೊಟ್ಟೆಗಾಗಿ । ಗೇಣು ಬಟ್ಟೆಗಾಗಿ ॥ ೨ ॥ ಬಡಿದು ಬಡಿದು ಕಬ್ಬಿಣವ ಕಾಸಿ ತುಪಾಕಿ ಮಾಡಿ । ಗುಂಡು ಮದ್ದು ಮಾಡುವದು ಹೊಟ್ಟೆಗಾಗಿ । ಗೇಣು ಬಟ್ಟೆಗಾಗಿ ॥ ೩ ॥ ಮುಂದೆ ಮುಂದೆ ಬಂಟರೆಲ್ಲ ಕತ್ತಿ ಢಾಲನ್ನೆ ಪಿಡಿದು । ಖಂಡತುಂಡ ಮಾಡುವದು ಹೊಟ್ಟೆಗಾಗಿ । ಗೇಣು ಬಟ್ಟೆಗಾಗಿ ॥ ೪ ॥ ದೊಡ್ಡ ದೊಡ್ಡ ಕುದುರೆ ಏರಿ ನ್ಯಾಯಹೊತ್ತು ರಾವುತರಾಗಿ । ಹೊಡೆದಾಡಿ ಸಾಯುವದು ಹೊಟ್ಟೆಗಾಗಿ । ಗೇಣು ಬಟ್ಟೆಗಾಗಿ ॥ ೫ ॥ ತುಂಟತುರಗವಾನೆ ಹೆಂಟೆಮಣ್ಣು ಹದಸಮಾಡಿ । ಕಷ್ಟಮಾಡುವದು ತಮ್ಮ ಹೊಟ್ಟೆಗಾಗಿ । ಗೇಣು ಬಟ್ಟೆಗಾಗಿ ॥ ೬ ॥ ಕಂಟಕತನದಿಂದ ಕಳ್ಳತನವನ್ನೆ ಮಾಡಿ । ಕಟ್ಟಿ ಹೊಡಿಸಿಕೊಂಬುವದು ಹೊಟ್ಟೆಗಾಗಿ । ಗೇಣು ಬಟ್ಟೆಗಾಗಿ ॥ ೭ ॥ ಸಂನ್ಯಾಸಿ ಜಂಗಂ ಜೋಗಿ ಜಟ್ಟಿ ಮೂಢ ಬೈರಾಗಿ । ನಾನಾವೇಷವ ಕೊಂಬೊದ್ಹೊಟ್ಟೆಗಾಗಿ । ಗೇಣು ಬಟ್ಟೆಗಾಗಿ ॥ ೮ ॥ ಉನ್ನತಕಾಗಿನೆಲೆಯಾದಿಕೇಶವನ । ಅನುದಿನ ನೆನೆವುದು ಭಕ್ತಿಗಾಗಿ । ಪರಮುಕ್ತಿಗಾಗಿ ॥ ೯ ॥ —(ದಾ.)

ಮೋಕ್ಷದ ಮಾತೊಂದೇ ಅಲ್ಲದೆ ವ್ಯವಹಾರದ ಮಾತು ಕೂಡ ಭಗವದನುಗ್ರಹದಿಂದಲೇ ಸಾಗುವದೆಂಬರ್ಥದಲ್ಲಿ ವಿವೇಕಿಗಳು ಹೇಳುವದೇನೆಂದರೆ—

ಭಾ॥ ಗೋಪುರದ ಭಾರವನು ಗಾರೆಯ | ರೂಪುದೋರಿದ ಪ್ರತಿಮೆಯಂದದಿ | ಈ ಪರಿಯ ಸಂಸಾರಭಾರವನಾರು ತಾಳುವರು ? ॥ ತಾ ಪರಾಕ್ರಮಿಯೆಂದು ಮನುಜನು | ಕಾಪಥವನೈದುವನು ; ವಿಶ್ವ | ವ್ಯಾಪಕನು ನೀನಹುದು ; ರಕ್ಷಿಸು ನಮ್ಮನನವರತ ॥ —(ಹ. ಭ. ಸಾ)

ಆದ್ದರಿಂದ ಎಲ್ಲ ವಿಷಯಕ್ಕೂ ಶಿವನನ್ನೇ ಆಶ್ರಯಿಸಬೇಕೆಂದು ದೊಡ್ಡವರು ಹೇಳಿರುವದೇನೆಂದರೆ—

ಶ್ಲೋ॥ ಚಿತ್ತಭೂಪಿತ್ತಭೂಮತ್ತಭೂಪಾಲಕೋ | ಪಾಸನಾವಾಸನಾಯಾಸನಾನಾಭ್ರಮೈಃ ॥ ಸಾಧುತಾ ಸಾ ಧುತಾ ಸಾಧಿತಾ ಸಾಧಿತಾ | ಕಿಂ ತಯಾ ಚಿಂತಯಾ ಚಿಂತಯಾಮಃ ಶಿವಮ್ ॥ — (ಸು)

ಅ॥ ಆಸೆ, ಮದ ಇವುಗಳಿಂದ ಮದಿಸಿದ ಅರಸರ ಹಿಂದುಮುಂದು ಸುತ್ತಾಡುತ್ತಿರುವ ಚಟದಿಂದ ಸುಮ್ಮನೇ ಸುತ್ತಿಸುತ್ತಿ ಸಾಧುತ್ವವೆಂಬುದನ್ನು ತೊಳೆದುಕೊಂಡದ್ದಾಯಿತು. (ಸ+ಆಧಿತಾ) ರೋಗದೊಡನೆ ಕೂಡಿರುವಿಕೆಯನ್ನು ಪಡೆದುಕೊಂಡದ್ದಾಯಿತು. ಆದ್ದರಿಂದ ಆ ಚಿಂತೆಯಿಂದೇನು ಪ್ರಯೋಜನ? ಈಶ್ವರನನ್ನು ಚಿಂತೆಮಾಡೋಣ.

ಈಶ್ವರನಿಗೆ ಶರಣುಹೋದದ್ದರ ಪ್ರಭಾವವಾಗಿ ತನ್ನಲ್ಲಿ ಒಳಗೇ ಸ್ಫೂರ್ತಿಯಾಗುವದೇನೆಂದರೆ—

ಸೌರಾಷ್ಟ್ರ— ಛಾಪು

ಮಾಡು ದಾನ ಧರ್ಮ ಪರಉಪಕಾರವ ಮರೆಯದಿರೆಚ್ಚರಿಕೆ | ಕೇಡ ನೆನೆಯಬೇಡ ನಂಬಿದವರ ಮೇಲೆ; ಕೆಡುವೆ ನೀನೆಚ್ಚರಿಕೆ ॥ಪ॥ ಬಾಳಿ ಬದುಕಿ ನೇರಿ ಇರುವಾಗಲೆ ಬಂಧುಬಳಗಗಳೆಚ್ಚರಿಕೆ ॥ ಹಾಳು ಸಂಸಾರಕ್ಕೆ ಹಲವರ ಹತಗೈದು ಬದುಕದಿರೆಚ್ಚರಿಕೆ ॥೧॥ ಚೆನ್ನಾಗಿ ಬದುಕಿದೆ ನಾನು ಗಳಿಸಿದೆಂಬೊ ಚೇಷ್ಟೆ ಬೇಡೆಚ್ಚರಿಕೆ ॥ ಮುನ್ನ ಮಾಡಿದ ಪುಣ್ಯಫಲದಿಂದ ಬಂದದ್ದು ಮುಂದೆ ನೋಡೆಚ್ಚರಿಕೆ ॥೨॥ ಹೆಣ್ಣುಹೊನ್ನುಮಣ್ಣು ನಿನ್ನಣಕಿಸಿ ಹೋದುದಿನ್ನು ನೋಡೆಚ್ಚರಿಕೆ ॥ ಇನ್ನು ನಂಬಬೇಡ ನಿನಗೆ ಮೃತ್ಯುವು ಕಂಡ್ಯ ತಿಳಿದಿರು ಎಚ್ಚರಿಕೆ ॥೩॥ ಬಲ್ಲಿದ ನೀನೆಂದು ಬಡವರ ಬಾಯ್ಮೇಲೆ ಬಡಿಯದಿರೆಚ್ಚರಿಕೆ ॥ ಎಳ್ಳಷ್ಟು ತಪ್ಪದೆ ಯಮನಾಳುಗಳು ನರಕಕ್ಕೆಳೆಯುವರೆಚ್ಚರಿಕೆ ॥೪॥ ಕಾಲನ ದೂತರು ಯಾವಾಗ ಎಳೆವರೋ ಕಾಣದು ಎಚ್ಚರಿಕೆ ॥ ಬೇಲೂರ ಪುರವಾಸ ನೆಲೆಯಾದಿಕೇಶವನ ಮರೆಯದಿರೆಚ್ಚರಿಕೆ ॥೫॥ —(ದಾ)

ಪರೋಪಕಾರಿಗಳ ಬಾಳೇ ಬಾಳೆಂದು ನೀತಿಶಾಸ್ತ್ರಕಾರರು ಹೇಳಿರುವದೇನೆಂದರೆ—

ಶ್ಲೋ॥ ಜಾತಃ ಕೂರ್ಮಃ ಸ ಏಕಃ ಪೃಥುಭುವನಭರಾಯಾರ್ಪಿತಂ ಯೇನ ಪೃಷ್ಟಮ್; | ಶ್ಲಾಘ್ಯಂ ಜನ್ಮ ಧ್ರುವಸ್ಯ ಭ್ರಮತಿ ನಿಯಮಿತಂ ಯತ್ರ ತೇಜಸ್ವಿಚಕ್ರಮ್; ॥ ಸಂಜಾತವ್ಯರ್ಥಪಕ್ಷಾಃ ಪರಹಿತಕರಣೇ ನೋಪರಿಷ್ಟಾನ್ನವಾಧೋ | ಬ್ರಹ್ಮಾಂಡೋದುಂಬುರಾಂತರ್ಮಶಕವದಪರೇ ಜಂತವೋ ಜಾತನಷ್ಟಾಃ ॥ —(ಸು.)

ಅ॥ ದೊಡ್ಡ ಪರ್ವತದ ಭಾರಕ್ಕೆ ಬೆನ್ನುಕೊಟ್ಟ ಕೂರ್ಮನ ಬಾಳು ಸಾರ್ಥಕವು! ತೇಜಸ್ವಿ ಚಕ್ರವನ್ನೆಲ್ಲ ನಿಯಮದಿಂದ ತಿರುಗಿಸುತ್ತಿರುವ ಧ್ರುವನ ಬಾಳು ಸಾರ್ಥಕವು!! ಪರಹಿತಕ್ಕೆ ಕೈಹಾಕದೆ ಇರುವವನಿಗೆ ಮೇಲೂ ಇಲ್ಲ; ಕೆಳಗೂ ಇಲ್ಲ. ಉಳಿದವರೆಲ್ಲ ಈ ಬ್ರಹ್ಮಾಂಡದಲ್ಲಿ ಸೊಳ್ಳೆಗಳಂತೆ ಹುಟ್ಟಿ ಸತ್ತವರು.

ಪರೋಪಕಾರವೆಂಬುದು ಪರಮೇಶ್ವರನಿಗೆ ಕೂಡ ಹೆಚ್ಚೆನಿಸಿದ್ದೆಂತೆಂದರೆ—

ಶ್ಲೋ॥ ಪರೋಪಕೃತಿಕೈವಲ್ಯೇ ತೋಲಯಿತ್ವಾ ಜನಾರ್ದನಃ। ಗುರ್ವೀಮುಪಕೃತಿಂ ಮತ್ವಾ ಹ್ಯವತಾರಾನ್ದಶಾಗ್ರಹೀತ್ ॥ —(ಸು)

ಅ॥ ವಿಷ್ಣು ಪರೋಪಕಾರವನ್ನೂ ಕೈವಲ್ಯವನ್ನೂ ತೂಕಮಾಡಿ ನೋಡಿ ಪರೋಪಕಾರವೇ ಮಹತ್ತಾದದ್ದೆಂದು ತಿಳಿದು ದಶಾವತಾರಗಳನ್ನು ಮಾಡಿದನು.

ಪರೋಪಕಾರಕ್ಕಾಗದ ಬಾಳನ್ನು ಒಂದು ಮರವು ಕೂಡ ಕಡೆಗಂಡಿರುವದೆಂತೆಂದರೆ—

ಶ್ಲೋ॥ ಕಸ್ತ್ವಂ? ಭೋಃ, ಕಥಯಾಮಿ, ದೈವಹತಕಂ ಮಾಂ ವಿದ್ಧಿ ಶಾಖೋಟಕಮ್; । ವೈರಾಗ್ಯಾದಿವ ವಕ್ಷಿ ಸಾಧುವಿದಿತಂ, ಕಸ್ಮಾದಿದಂ ಕಥ್ಯತೇ? ॥ ವಾಮೇನಾತ್ರ ವಟಸ್ತಮಧ್ವಗಜನಃ ಸರ್ವಾತ್ಮನಾ ಸೇವತೇ, । ನ ಚ್ಛಾಯಾಪಿ ಪರೋಪಕಾರಕರಿಣೀ ಮಾರ್ಗಸ್ಥಿತಸ್ಯಾಪಿ ಮೇ ॥ —(ಸು)

ಅ॥ ನೀನು ಯಾರಯ್ಯ? ಹೇಳುತ್ತೇನೆ, ನನ್ನನ್ನು ದುರ್ದೈವಿಯಾದ ಬೂರಗದ ಮರವೆಂದು ತಿಳಿ. ಬಹಳ ಬೇಸತ್ತು ಹೇಳುತ್ತಿ; ಚೆನ್ನಾಗಿ ಗೊತ್ತಾಯಿತು; ಹೀಗೇಕೆ ಹೇಳುತ್ತಿ? ಎಡ ಪಕ್ಕದಲ್ಲೊಂದು ಮರವಿದೆ; ದಾರಿಹೋಕರೆಲ್ಲರೂ ಅದನ್ನು ಎಲ್ಲ ಕಡೆಗಳಲ್ಲಿಯೂ ಆಶ್ರಯಿಸುತ್ತಾರೆ; ನಾನು ದಾರಿಯಲ್ಲಿಯೇ ಇದ್ದರೂ ನನ್ನ ನೆರಳು ಕೂಡ ಪರೋಪಕಾರವನ್ನು ಮಾಡುವದಿಲ್ಲವಲ್ಲ!

ಇನ್ನು ಪರೋಪಕಾರವನ್ನು ಸಾಂಗವಾಗಿ ನಡೆಸಬೇಕೆನ್ನುವವರು ಮೊದಲು ಮಾಡಬೇಕಾದದ್ದೇನೆಂದರೆ—

ಸಾವೇರಿ—ಝಂಪೆ

ವಂದಿಸುವದಾದಿಯಲಿ ಗಣನಾಥನ ॥ ಸಂದೇಹವಿಲ್ಲ ಶ್ರೀಹರಿಯಾಜ್ಞೆಯಿದಕೆ ॥ ಪ ॥ ಹಿಂದೆ ರಾವಣ ತಾನು ವಂದಿಸದೆ ಗಜಮುಖನ । ನಿಂದು ತಪವನು ಗೆಯ್ಯೆ ವರ ಪಡೆಯಲು ॥ ನಂದಿವಾಹನಸುತನು ಬಂದು ವಿಘ್ನವ ಮಾಡಿ ಅಂದು ವರವನು ದಕ್ಕದಂತೆ ಮಾಡಿದನು ॥ ೧ ॥ ಅಂದಿನಾ ಬಗೆಯಂತು ಬಂದು ಹರಿ ಧರ್ಮಜಗೆ। ಮುಂದೆ ಗಣಪನ ಪೂಜಿಸೆಂದು ಪೇಳೆ ॥ ನಂದದಿಂದಲೆ ನಿಂದು ಪೂಜಿಸಲು ಗಣನಾಥ। ಹೊಂದಿಸಿದ ನಿರ್ವಿಘ್ನದಿಂದ ರಾಜ್ಯವನು ॥ ೨ ॥ ಬಂದು ಜನರೆಲ್ಲ ಉಮೆನಂದನನ ಪೂಜಿಸಲು। ಚಂದದಿಂದಲಿ ವಾಕುಶುದ್ಧಿ ಇತ್ತು ॥ ತಂದೆ ಶ್ರೀಪುರಂದರಾ ವಿಠಲನ ಸೇವೆಯೊಳು। ಬಂದ ವಿಘ್ನವ ಕಳೆದು ಆನಂದವನೆ ಕೊಡುವ ॥ ೩ ॥ —(ದಾ)

ಗಣಪತಿಯು ಪರೋಪಕಾರದಲ್ಲಿ ಹೆಸರುಗೊಂಡಿರುವದೇ ಅವನ ಪ್ರಥಮ ಪೂಜೆಗೆ ಕಾರಣವಾದ್ದರಿಂದಲೇ ಕೀರ್ತನಾರಂಭದಲ್ಲಿ ಭಾಗವತೋತ್ತಮರು **'ಧನ್ಯನೆಂದೆನಿಸುವನು'** ಎಂದು ಮುಂತಾಗಿ ಉಪದೇಶಮಾಡಿರುವರು. ಅವನ ಪರೋಪಕಾರದ ಸ್ವರೂಪವನ್ನು ತೋರಿಸುವದಕ್ಕಾಗಿ ಗಣಪತಿಯ ವಿಜಯಯಾತ್ರೆಯೆಂಬ ಆಖ್ಯಾನವು ಇಲ್ಲಿ ನಿರೂಪಣಮಾಡಲಾಗುವದು.

## ಆಖ್ಯಾನ

ಕೀ॥ ತರಣಿಯ ವರದಿಂ ಹುಟ್ಟುತ ಮಿಥಿಲಾ । ಪುರದೊಳರಸುತನಗೆಯ್ಯುತ್ತ ॥ ಮೆರೆಯುತ್ತಿರ್ದನು ಸಿಂಧುಭೂಪನೀ । ಧರೆಯನೆಲ್ಲವನು ಜಯಿಸುತ್ತ ॥

ಅವನು ಅಷ್ಟರಿಂದಲೇ ತೃಪ್ತನಾಗದೆ—

ದಿಂ॥ ತರಣಿಯಂ ತಪದೊಳ್ಮೆಚ್ಚಿಸುತ್ತೆ ತಾನು । ಭರದಿ ತಾಂ ಪಡೆದಂ ಸುಧಾಘುಟಿಕೆಯನ್ನು ॥ ಇರದೆ ಬಲ್ಪಿಂ ಸೋಲಿಸುತ್ತಮರರನ್ನು । ಸೆರೆಯೊಳಿಟ್ಟಂ ತೋರಿಸುತ ದರ್ಪವನ್ನು ॥

ಹೀಗೆ ಸೊಕ್ಕಿದ ಅವನು ಎಷ್ಟುಮಟ್ಟಿಗೆ ವಿಷಯಾಸಕ್ತನಾಗಿದ್ದನೆಂದರೆ—

ಭಾ॥ ಒಂದು ದಿನ ನರ್ತಕಿಯರೊಗ್ಗಿನ । ಬಂಧುರದ ಗಾನವನು ಕೇಳ್ವಾ । ನಂದಕಡ್ಡವದೆನಿಸೆ ಸುರಮುನಿವೀಣೆ ಮೇಲ್ಗಡೆಯೊಳ್ ॥ ಅಂದು ನೃಪನಪ್ಪಣೆಯೊಳವನನು । ತಂದು ನಿಲ್ಲಿಸಲನುಚರರು ದಯೆ । ಯಿಂದ ಬಿಟ್ಟನು ದಾಸನೆಂದವನನ್ನು ಸಿಂಧುನೃಪ ॥

ಆಗ ನಾರದರು ತಮ್ಮ ದುರ್ದಶೆಯನ್ನು ನೆನೆದು ಸೆರೆಯಲ್ಲಿದ್ದ ದೇವತೆಗಳ ಬಳಿಗೆ ಹೋಗಿ ಅವರನ್ನು ಕುರಿತು ಆ ದುರ್ದಶೆಯಿಂದ ಮೊದಲು ಪಾರಾಗಹೇಳಲು ಅವರು ನಿರಾಶೆಯನ್ನು ತೋರಿಸಿದ್ದನ್ನು ನೋಡಿ ನಾರದರು ಹೇಳುತ್ತಾರೆ.—

ವೃ॥ ಉಡುರಾಜಂ ಕಳೆಗುಂದಿ ಪೆರ್ಚದಿಹನೇ? ನ್ಯಗ್ರೋಧಬೀಜಂ ಕೆಲಂ । ಸಿಡಿದುಂ ಪೇರ್ಮರನಾಗದೇ? ಎಳೆಗರುಂ ಎತ್ತಾಗದೇ? ಲೋಕದೊಳ್ ॥ ಮಿಡಿ ಪಣ್ಣಾಗದೆ? ದೈವದೊಲ್ಮೆಯಿರೆ ತಾಂ ಕಾಲಾನುಕಾಲಕ್ಕೆ ಪೇ । ಳ್ಬಡವಂ ಬಲ್ಲಿದನಾಗನೇ? ಹರಹರಾ ಶ್ರೀಚೆನ್ನಸೋಮೇಶ್ವರಾ ॥ —(ಸೋ. ೮)

ಇಷ್ಟೇ ಅಲ್ಲದೆ ಉನ್ನತಿಯ ದಾರಿಯನ್ನು ಅವರು ಸೂಚಿಸಿದ್ದೇನೆಂದರೆ—

ಸಾ॥ ಬಿಸುಗದಿರನ ಬಲದಿಂದಲಿ ನಿಮ್ಮನು । ವಶಗೊಂಡಿಹನವನೀಗ; ॥ ಬಿಸುಗಣ್ಣನ ಬಲದಿಂ ನೀವವನನು । ವಶಗೊಳ್ಳಿರಿ ಕಡುಬೇಗ ॥

ಹೀಗೆಂದು ನಾರದರು ಹೋಗುತ್ತಲೇ ಆ ದೇವತೆಗಳೆಲ್ಲರೂ ಶಿವನಿಗೆ ಮೊರೆಹೋಗುವದು—

ಹಿಂದುಸ್ಥಾನಿ ಮುಖಾರಿ— ಏಕತಾಳ

ಗಿರಿಶಾ, ಗೌರೀಪ್ರಾಣಾಧೀಶ, ಜಯಜಯ । ದುರಿತವಿನಾಶಮಹೇಶ ॥ಪ॥ ದಕ್ಷಯಜ್ಞವಿಧ್ವಂಸಕಾರಿ, ಸುರ । ಪಕ್ಷಪಾತಿ, ಕಾಮಾರಿ, ದುಃಖಹರ, । ಘೋರಪಾಪಸಂದೋಹನಾಶನ, । ಭೂರಿದಯಾಳೋ, ಭೋಗಿಭೂಷಣ, । ಈಶ, ಗಿರೀಶ, ಧನೇಶ್ವರಮಿತ್ರ, । ಕಾಶೀಶ್ವರ, ಸುರಸನ್ನುತಿಪಾತ್ರ, । ವಾಸವಾದಿನುತ, ದುಷ್ಟಭಯಂಕರ । ವೇಷ, ಜಟಾಧರ, ಚಂದ್ರಶೇಖರ, । ಕಲಭಪ್ರೌಢಮಹಾ ನಾಟ್ಯೇಶ್ವರ, । ಅವಿಮುಕ್ತೇಶ್ವರ, ಪ್ರಮಥಗಣೇಶ್ವರ, । ಕಾಳಿಂದೀಪ್ರಿಯ, ಕಮಲನಯನಸಖ, । ಕಾಲಕಾಲ, ಕಾಲಾಗ್ನಿಪಂಚಮುಖ, । ನೀಲಕಂಠ, ನಿಖಿಲಾ ಮರರಕ್ಷಕ, । ಫಾಲಚಂದ್ರ, ಸಂಸ್ಕೃತಿವಿಷಭಕ್ಷಕ, । ಶಾಂತಮೂರ್ತಿ, ವರಶಾಂತಿ ಗುಣಪ್ರಿಯ, । ಶಾಂತಿದಾಯಕಾ, ಶಾಂತಸಂಶಯ, । ಕುಂಭಜಾತನುತನಟನ ವಿಲಾಸ, । ಶಂಭೋ, ಹರ, ಚಿದಾಕಾಶನಿವಾಸ ॥ —(ಭಕ್ತಿ. ಗೀ)

ಇದರಿಂದ ಸಂತುಷ್ಟನಾದ ಶಿವನು ಪ್ರಸನ್ನನಾಗಿ ಅವರಿಗೆ ಅಭಯವನ್ನು ಕೊಡುತ್ತಲೇ ಪಾರ್ವತಿಯು ಗರ್ಭಿಣಿಯಾಗಿದ್ದಾಳೆ.

ಚೌ॥ ಸಿಧಿಯನೊಳಕೊಂಡಮಲಶೋಭಾ-ಸ್ಪದದ ಕಾಶ್ಯಪಿಯಂದದಿ । ಒದಗಿದಗ್ನಿಯ ಸುಳಿವನೊಳಗೇ-ಹುದುಗಿಸಿಹ ಶಮಿಯಂದದಿ ॥ ಮಧುರಜಲ ವೊಳಗೊಳಗೆ ಹರಿಯುವ-ನದಿ ಸ್ವರಸತಿಯಂದದಿ । ಮುದವನಿತ್ತಳು ಗಿರಿಜೆ ತನ್ನೊಳ-ಗುದುಭವಿಸಿದಾ ಗರ್ಭದಿ ॥

ಆ ಗರ್ಭದಲ್ಲಿ ಗಣಪತಿಯ ಉತ್ಪತ್ತಿ—

ಶ್ಲೋ॥ ಶಿವಯೋಃ ಸುಧಾಹರಿದ್ರಾ । ದೀಪ್ತಿಮತೋಃ ಸಾರಭೃಜ್ಜಗತ್ಪಿತ್ರೋಃ ॥ ತ್ರಿಭುವನವಿಘ್ನಧ್ವಂಸೀ ಕರಿಕಲ್ಪಃ ಕಶ್ಚಿದರುಣಿಮಾ ಜಯತಿ ॥ —(ಸು)

ಅ॥ ಸುಣ್ಣದಹಾಗೆ ಬೆಳಗುವ ಶಿವನ ಮತ್ತು ಅರಸಿನದ ಹಾಗೆ ಹೊಂಬಣ್ಣವಾಗಿರುವ ಪಾರ್ವತಿಯ ರೂಪವಾಗಿರುವ ಜಗತ್ತಿನ ತಾಯಿತಂದೆಗಳ ಸಾರಭೂತವಾಗಿ ಮೂರುಲೋಕಗಳ ವಿಘ್ನಗಳನ್ನು ಕಳೆಯುವಂಥ ಆನೆಯಂತಿರುವ ಕೆಂಪಾದ ವಿಗ್ರಹವು ಶೋಭಿಸುತ್ತದೆ.

ಜಗತ್ತಿನ ತಾಯಿತಂದೆಗಳಾದ ಆ ಪಾರ್ವತೀಪರಮೇಶ್ವರರ ವಿನೋದವನ್ನು ಒಬ್ಬ ಕವಿ ವರ್ಣಿಸಿರುವದೇನೆಂದರೆ—

ಶ್ಲೋ॥ ಕ್ವ ತಿಷ್ಠತಸ್ತೇ ಪಿತರೌ ಮಮೇವೇ । ತ್ಯಪರ್ಣಯೋಕ್ತೇ ಪರಿಹಾಸಪೂರ್ವಮ್ ॥ ಕ್ವ ವಾ ಮಮೇವ ಶ್ವಶುರೌ ತವೇತಿ । ತಮಿಾರಯನ್ಸಸ್ಮಿತ ಮಿಾಶ್ವರೋಽವ್ಯಾತ್ ॥ —(ಸು)

ಅ॥ ಪಾರ್ವತಿಯು ವಿನೋದಕ್ಕಾಗಿ 'ನನಗೆ ಇರುವ ಹಾಗೆ ನಿನಗೆ ತಾಯಿತಂದೆಗಳೆಲ್ಲಿದ್ದಾರೆ?' ಎಂದು ಕೇಳಲು 'ನನಗಿರುವ ಹಾಗೆ ನಿನಗೆ ಅತ್ತೆಮಾವಂದಿರು ಎಲ್ಲಿದ್ದಾರೆ?' ಎಂದು ನಗುತ್ತ ಹೇಳಿದ ಪರಮೇಶ್ವರನು ನಮ್ಮನ್ನು ಕಾಪಾಡಲಿ.

ಇದು ಬರೀ ಅವರ ತಮ್ಮತಮ್ಮೊಳಗಣ ವಿನೋದವಾಯಿತಷ್ಟೆ. ಇನ್ನು ಅವರ ಮಕ್ಕಳ ವಿನೋದವು ಹೇಗಿತ್ತೆಂದರೆ—

ಶ್ಲೋ॥ ಹೇ ಹೇರಂಬ, ಕಿಮಂಬ, ರೋದಿಷಿ ಕಥಂ? ಕರ್ಣೌ ಲುಠತ್ಯಗ್ನಿಭೂಃ; । ಕಿಂ ತೇ ಸ್ಕಂದ ವಿಚೇಷ್ಟಿತಂ? ಮಮ ಪುರಾ ಸಂಖ್ಯಾಕೃತಾ ಚಕ್ಷುಷಾಮ್; । ನೈತತ್ತೇಪ್ಯುಚಿತಂ ಗಜಾಸ್ಯ ಚರಿತಂ; ನಾಸಾ ಮಿಮಾತೇಽಂಬ ಮೇ;। ತಾವೇವಂ ಸಹಸಾ ವಿಲೋಕ್ಯ ಹಸಿತವ್ಯಗ್ರಾ ಶಿವಾ ಪಾತು ವಃ ॥ —(ಸು)

ಅ॥ ಎಲೋ ಗಣಪತಿ; ಏನಮ್ಮ? ಏಕೆ ಅಳುತ್ತಿ? ಷಣ್ಮುಖನು ಕಿವಿಹಿಂಡುತ್ತಾನೆ. ಎಲೋ ಷಣ್ಮುಖನೆ, ಏನು ನಿನ್ನ ಚೇಷ್ಟೆ?; ಮೊದಲು ನನ್ನ ಕಣ್ಣುಗಳನ್ನೆಣಿಸಿದನು; ಎಲೋ ಗಣಪತಿ, ಇದು ನಿನಗೆ ಸರಿಯಲ್ಲ; ಅಮ್ಮ ನನ್ನ ಮೂಗನ್ನು ಅಳೆಯುತ್ತಾನೆ; ಹೀಗೆ ಹೇಳುವ ಇಬ್ಬರನ್ನೂ ನೋಡುತ್ತ, ನಗೆಯೂ ಕೋಪವೂ ಏಕಕಾಲದಲ್ಲಿರುವ ಪಾರ್ವತಿಯು ನಮ್ಮನ್ನು ಕಾಪಾಡಲಿ.

ಇದು ಇಬ್ಬರು ಸೇರಿದಾಗಿನ ಚೇಷ್ಟೆಯಷ್ಟೆ. ಗಣಪತಿಯೊಬ್ಬನ ವಿಷಯವನ್ನೇ ಕೇಳಿ—

ಶ್ಲೋ॥ ಕ್ರೋಡಂ ತಾತಸ್ಯ ಗಚ್ಛನ್ ವಿಶದಬಿಸಧಿಯಾ ಶಾಬಕಂ ಶೀತಭಾನೋ । ರಾಕರ್ಷನ್ಫಾಲವೈಶ್ವಾನರಸಿಶಿತಶಿಖಾರೋಚಿಷಾ ತಪ್ಯಮಾನಃ ॥ ಗಂಗಾಂಭಃ ಪಾತುಮಿಚ್ಛುಃ ಭುಜಗಪತಿಫಣಾಫೂತ್ಕೃತೈರ್ದೂಯಮಾನೋ । ಮಾತ್ರಾ ಸಂಬೋಧ್ಯ ಸೀತೋ ದುರಿತಮುಪನಯೇದ್ಬಾಲವೇಷೋ ಗಣೇಶಃ ॥ —(ಸು)

ಅ॥ ತಂದೆಯ ತಲೆಯ ಮೇಲೆ ಅಡರಿ ಅಲ್ಲಿ ಬಾಲಚಂದ್ರನನ್ನು ಕಮಲದ ದಂಟೆಂದು ಎಳೆದುಕೊಳ್ಳುವುದಕ್ಕೆ ನೀಡಲು ಹಣೆಯಲ್ಲಿದ್ದ ಉರಿಗಣ್ಣಿನ ಸೆಕೆ ತಾಕಿತು. ಆಗ ಗಂಗೆಯ ನೀರನ್ನು ಕುಡಿಯುವದಕ್ಕೆ ಹೋಗಲು ಹಾವು ಹೆಡೆಯನ್ನಗಲಿಸಿ ಭುಸ್ಸೆಂದಿತು. ಅದನ್ನು ಕಂಡು ಗಣಪತಿಯ ಮನಸ್ಸು ಕುದಿಯುತ್ತಿರಲು ಪಾರ್ವತಿಯು ಅವನನ್ನು ಎತ್ತಿಕೊಂಡು ಸಮಾಧಾನ ಮಾಡಿದಳು. ಇಂಥ ಬಾಲವೇಷದ ಗಣಪತಿಯು ನಮ್ಮ ಪಾಪಗಳನ್ನು ಹೋಗಲಾಡಿಸಲಿ.

ಆ ಗಣಪತಿಯು ಆಗ ತನ್ನ ಗುಣವಿಶೇಷದಿಂದ ಜನರಿಂದ ಹಾಡಿಸಿಕೊಂಡದ್ದೇನೆಂದರೆ—

ಆನಂದಭೈರವಿ—ಆಟತಾಳ

ನಮ್ಮಮ್ಮ ಶಾರದೆ ಉಮಾಮಹೇಶ್ವರಿ । ನಿಮ್ಮೊಳಗಿಹನ್ಯಾರಮ್ಮ? ॥ ಕಮ್ಮಗೋಲನ ವೈರಿ । ಸುತನಾದ ಸೊಂಡಿಲ । ನಮ್ಮಯ್ಯ ಗಣನಾಥನೆ ॥ ಪ ॥ ಮೋರೆ ಕಪ್ಪಿನ ಭಾವ, ಮೊರದಗಲಾ ಕಿವಿ, । ಕೋರೆದಾಡೆಯನ್ಯಾರಮ್ಮ? ॥ ಮೂರುಕಣ್ಣಿನ ಸುತ, ಮುರಿದಿಟ್ಟ ಚಂದ್ರನ, । ಧೀರ ತಾ ಗಣನಾಥನೆ ॥ ೧ ॥ ಉಟ್ಟಪಟ್ಟೆಯುದಟ್ಟಿ, ಬಿಗಿದುಟ್ಟ ಚಲ್ಲಣ, । ಧಿಟ್ಟ ತಾನಿವನ್ಯಾರಮ್ಮ? ॥ ಸೃಷ್ಟಿಗೊಡೆಯಳಾದ ಗಿರಿಜೆಯ ಸುಕುಮಾರ । ಹೊಟ್ಟೆಯ ಗಣನಾಥನೆ ॥ ೨ ॥ ರಾಶಿ ವಿದ್ಯವಬಲ್ಲ, ರಮಣಿಹಂಬಲನೊಲ್ಲ, । ಭಾಷ್ಯಗಸಿವನ್ಯಾರಮ್ಮ? ॥ ಲೇಸಾಗಿ ಸುಜನರ ಸಲಹುವ ನೆಲೆಯಾದಿ । ಕೇಶವ ಗಣನಾಥನೆ ॥ ೩ ॥ —(ದಾ)

ಆ ಗಣಪತಿಯ ಪರಾಕ್ರಮದ ವಿಷಯದಲ್ಲಿ ಜನರು ಹೇಳುತ್ತಿದ್ದದ್ದೇನೆಂದರೆ—

ಕಂ॥ ಹೊಡೆದನು ಗಜಾಸುರನ, । ಬಡಿದನಾ ಕ್ರೌಂಚನನು, । ಪುಡಿಗುಟ್ಟಿದನು ವಿಘ್ನದೈತ್ಯನನ್ನು, ॥ ಮುಡುಹಿ ದುಷ್ಟರನು ಬೆಂ। ಬಿಡದೆ ಶಿಷ್ಟರ ಪೊರೆವ। ಕಡುಪರಾಕ್ರಮಿ ಗಣಪನೆಂದರೆಲ್ಲ ॥

ಗಣಪತಿಯು ಹೀಗೆ ಯಶಸ್ವಿಯಾಗಿರುವಾಗ ಆ ಗಣಪತಿಯ ಪರಾಕ್ರಮವನ್ನು ದೇವತೆಗಳ ಬಿಡುಗಡೆಗೆ ಉಪಯೋಗಮಾಡಿಕೊಳ್ಳಬೇಕೆಂದು ನೆನೆಸಿ ನಾರದರು ಶಿವನ ಮನೆಗೆ ಬಂದಿದ್ದಾರೆ. ಅದೇ ಸಮಯದಲ್ಲಿ ಒಳಗೆ ಗಂಡಹೆಂಡರ ಮಾತು ನಡೆಯುತ್ತಿದ್ದದ್ದೇನೆಂದರೆ—

ಪಾರ್ವತಿ — ಶ್ಲೋ॥ ವಿವಾಹಶ್ಚಿಂತ್ಯತಾಮಸ್ಯ ಮಯೂರೇಶಸ್ಯ ಸತ್ವರಮ್; । ಗತಾನಿ ತು ಮಹಾದೇವ, ವರ್ಷಾಣಿ ದಶಪಂಚಚ ॥ —(ಸು)

ಅ॥ ಹೇ ಮಹಾದೇವ, ಈ ನಮ್ಮ ಗಣಪತಿಯ ಮದುವೆಯಾದರೂ ಬೇಗ ಆಗುವಂತೆ ಯೋಚಿಸೋಣಾಗಲಿ. ಆಗಲೇ ಹದಿನೈದು ವರ್ಷಗಳಾಗಿಹೋದವು.

ಶಿವ—ಸಾಂ॥ ನನ್ನ ಮದುವೆಗಾಗಿ ಮಾಡಿದ ಸಾಲವೆ। ಮುನ್ನ ತಲೆಯ ಮೇಲಿಹುದು; ॥ ಇನ್ನೀಗ ಹೊಸದಾಗಿ ಸಾಲನ ಮಾಡುವ। ದೆನ್ನುವದೆನಗೆ ಶೋಭಿಸದು ॥

ಆ ಸಮಯಕ್ಕೆ ಸರಿಯಾಗಿ ನಾರದರು ಒಳಕ್ಕೆ ಬಂದು—

ಭಾ॥ ಪಂಚಮುಖ, ದಶಬಾಹು, ನಯನತ್ರಿ । ಪಂಚ, ಪಂಚಾಕ್ಷರಿಯ ಮೂರುತಿ, ಪಂಚವರ್ಣದ ಪಕ್ಷಿ ಪಂಜರದೊಳಗೆ ತೋರ್ಪಂತೆ ॥ ಪಂಚವಿಂಶತಿ ತತ್ತ್ವದೇಹದಿ । ಪಂಚಕೋಶದ ನಡುವೆ ನೆಲಸಿ ಪ್ರ। ಪಂಚಮೈಸಿಸುವ ದೇವ ರಕ್ಷಿಸು ನಮ್ಮನನವರತ ॥ —(ಶಿ. ಭ. ಸಾ)

ಹೀಗೆ ಹೇಳಿ ಕುಳಿತ ಮೇಲೆ ಯೋಗಕ್ಷೇಮದ ಮಾತನ್ನಾಡುತ್ತ ಅವಕಾಶವನ್ನು ಮಾಡಿಕೊಂಡು ಪಾರ್ವತಿಯು ನಾರದರನ್ನು ಕುರಿತು ಹೇಳಿದ್ದು—

ಸಾ॥ ಹಿರಿಯ ಮಗನು ತಾ ಮದುವೆಯೆ ಇಲ್ಲದೆ। ಇರುತಿರ್ಪನು ಕಣ್ಮುಂದೆ; ॥ ಕಿರಿಯವಗೀಗಲೆ ಮಾಡದೆ ಹೋದರೆ। ಬರುವದಿಲ್ಲವೇ? ನಿಂದೆ ॥

ಇದನ್ನು ಕೇಳಿ ನಾರದರು ವಿನೋದಕರವಾದ ಉತ್ತರವನ್ನು ಹೇಳಿದ್ದು —

ಶ್ಲೋ॥ ಉದರದ್ವಯಭರಣಭಯಾದರ್ಧಾಂಗಾಹಿತದಾರಃ। ಯದಿ ನೈವಂ ತಸ್ಯ ಸುತಃ ಕಥಮದ್ಯಾಪಿ ಕುಮಾರಃ ॥ —(ಸು)

ಅ॥ ನಿನ್ನ ಗಂಡನು ಎರಡು ಹೊಟ್ಟೆಗೆ ತಂದುಹಾಕಲಾರದೆ ತನ್ನ ಹೆಂಡತಿಯನ್ನು ಅರ್ಧಾಂಗದಲ್ಲಿಯೇ ಇಟ್ಟುಕೊಂಡಿದ್ದಾನೆ, ಹೀಗಿಲ್ಲದಿದ್ದರೆ ಅವನ ಮಗನಿನ್ನೂ ಬ್ರಹ್ಮಚಾರಿಯಾಗಿಯೇ ಏಕಿದ್ದಾನು?

ಇಷ್ಟೇ ಅಲ್ಲ—

ಶ್ಲೋ॥ ಸ್ವಯಂ ಪಂಚಮುಖಃ, ಪುತ್ರೌ ಗಜಾನನಷಡಾನನೌ, ॥ ದಿಗಂಬರಃ ಕಥಂ ಜೀವೇದನ್ನಪೂರ್ಣಾ ನ ಚೇದ್ಗೃಹೇ ॥ —(ಸು)

ಅ॥ ತನಗೆ ಐದುಬಾಯಿ. ಇಬ್ಬರು ಮಕ್ಕಳಲ್ಲಿ ಒಬ್ಬನು ಆನೆಯ ಮುಖದವನು; ಇನ್ನೊಬ್ಬನು ಆರು ಮುಖದವನು. ಅನ್ನಪೂರ್ಣೆಯಾದ ನೀನು ಮನೆಯಲ್ಲಿಲ್ಲದಿದ್ದರೆ ಆ ಬರಿ ಮೈಯವನು ಬದುಕುವದು ಹೇಗೆ?

ಎಂದು ಹೇಳಿ ಪಾರ್ವತಿಯನ್ನು ಹೊಗಳಿದ್ದು—

ಶ್ಲೋ॥ ಪಾರ್ವತೀಮೋಷಧೀಮೇಕಾಮುಪಹಾರ್ಯ ಮೃಗಯಾಮಹೇ। ಶೂಲೀ ಹಾಲಾಹಲಂ ಪೀತ್ವಾ ಯಯಾ ಮೃತ್ಯುಂಜಯೋಽಭವತ್ ॥ —(ಸು)

ಅ॥ ಈಶ್ವರನು ವಿಷವನ್ನು ಕುಡಿದ ಮೇಲೆ ಏತರಿಂದ ಸಾವನ್ನು ತಪ್ಪಿಸಿಕೊಂಡನೋ ಅಂಥ (೧) ಪರ್ವತದಲ್ಲಿ ಹುಟ್ಟಿದಂಥ ಮತ್ತು ಎಲೆಗಳಿಲ್ಲದಂಥ ಒಂದು ಗಿಡಮೂಲಿಕೆಯನ್ನು ಹುಡುಕುತ್ತೇವೆ. (೨) ಪರ್ವತರಾಜನ ಮಗಳಾದಂಥ ಅಪರ್ಣೆಯೆಂಬ ಔಷಧಿಯನ್ನು ಹುಡುಕುತ್ತೇವೆ.

ಹೀಗೆ ಹೇಳಿ ಕೊನೆಗೆ ತಾವು ಕನ್ಯೆಯನ್ನು ಹುಡುಕಿತಂದು ಗಂಟುಹಾಕುವುದಾಗಿ ಮಾತು ಕೊಟ್ಟು ಗಣಪತಿಯು ಬಳಿಗೆ ಬಂದು ಸತ್ಕಾರವನ್ನು ಹೊಂದಿ ಶಿವಪಾರ್ವತಿಯರ ಆಲೋಚನೆಯನ್ನು ತಿಳುಹಿ ತನಗೆ ಯುಕ್ತತೋರಿದ ಕನ್ಯೆಯರನ್ನು ಸೂಚಿಸಿದ್ದು—

ಕಂ॥ ಸುರರು ಸಿಂಧುವಿಗೆ ಸೋತಿಹರವರನು । ಸೆರೆಯಿಂ ಬಿಡಿಸೀಗಲೆ ತಮ್ಮ ॥ ತರಳೆಯರಾದಾ ಋದ್ಧಿಸಿದ್ಧಿಗಳ। ನಿಂದೀವನು ಹರ್ಷದಿ ಬ್ರಹ್ಮ ॥

ಈ ಮಾತು ಕೇಳುತ್ತಲೇ ಗಣಪತಿ ಹೇಳಿದ್ದು—

ಆ॥ ತರುಣಿಯನಿತರರವ್ರೊಲ್ಲಾಂ । ಪರಿಸುವದಕೆ ಮುನ್ನ ಪಿತಾಗ ಪುಮಾಸ ಸರ ॥ ಸೆರೆಯಂ ಕಳೆದು ಜಯಸುತ್ತೀ। ತರುಣಿಯರ ಕೈಯನ್ನೆ ಸೋದಲು ಹಿಡಿಯುವೆನಾಂ ॥

ಹೀಗೆ ಹೇಳಿ ಆವನು ಮಾಡಿದ ಪ್ರತಿಜ್ಞೆಯೇನೆಂದರೆ—

ಶ್ಲೋ॥ ಪರೋಪಕಾರಾಯ ಫಲಂತಿ ವೃಕ್ಷಾಃ; । ಪರೋಪಕಾರಾಯ ವಹಂತಿ ನದ್ಯಃ; ॥ ಪರೋಪಕಾರಾಯ ದುಹಂತಿ ಗಾವಃ; । ಪರೋಪಕಾರಾರ್ಥಮಿದಂ ಶರೀರಮ್ ॥ —(ಸು)

ಅ॥ ಮರಗಳು ಪರೋಪಕಾರಕ್ಕಾಗಿ ಹಣ್ಣುಬಿಡುತ್ತವೆ. ನದಿಗಳು ಪರೋಪಕಾರಕ್ಕಾಗಿ ಹರಿಯುತ್ತವೆ. ಹಸುಗಳು ಪರೋಪಕಾರಕ್ಕಾಗಿ ಹಾಲುಕೊಡುತ್ತವೆ ಈ ಶರೀರವು ಪರೋಪಕಾರಕ್ಕಾಗಿ ಇರುವುದು.

ಆಗ ನಾರದರು ಅವನ ಬೆನ್ನುಚಪ್ಪರಿಸಿ ಹೇಳಿದ್ದು—

ಶ್ಲೋ॥ ರಕ್ತತ್ವಂ ಕಮಲಾನಾಂ, । ಸತ್ಪುರುಷಾಣಾಂ ಪರೋಪಕಾರಿತ್ವಂ ॥ ಅಸತಾಂ ಚ ನಿರ್ದಯತ್ವಂ, । ಸ್ವಭಾವಸಿದ್ಧಂ ತ್ರಿಷು ತ್ರಿತಯಮ್ —(ಸು)

ಅ॥ ಕೆಂಪಗಿರುವಿಕೆಯು ಕಮಲಗಳಿಗೂ ಪರೋಪಕಾರಮಾಡುವುದು ಸತ್ಪುರುಷರಿಗೂ ನಿರ್ದಯರಾಗಿರುವುದು ದುಷ್ಟರಿಗೂ ಮೂರು ಮೂವರಿಗೂ ಹುಟ್ಟುಗುಣವಾಗಿರುವುದು.

ಹೀಗೆಂದು ನಾರದರು ಹೋಗುತ್ತಲೇ ಗಣಪತಿಯು ತನ್ನ ತೋಳಬಲುಮೆಯ ಮಬ್ಬಿನಲ್ಲಿ ತಂದೆತಾಯಿಗಳ ಆಜ್ಞೆಯನ್ನು ಲಕ್ಷಿಸದೆ ಸಿಂಧುವಿನ ಮೇಲೆ ಸೇನೆಯನ್ನು ಹೊರಡಿಸಿದ್ದಾನೆ—

ರ|| ಬಂತೈ | ಗಣನಾಥನ ಸೇನೆ | ಬಂತೈ || ಪ || ಹೆಗಲೇರಿರುವ ಕುಠಾರಗಳಿಂದ | ಬಗೆಬಗೆಯಾದ ಕಠಾರಿಗಳಿಂದ | ಥಳಥಳ ಹೊಳೆಯುವ ಕತ್ತಿಗಳಿಂದ | ಇಳೆಯನು ಹೆದರಿಪ ಢಕ್ಕೆಗಳಿಂದ | ಹಿಡಿಯೊಳು ಪಿಡಿದಿಹ ಪಾಶಗಳಿಂದ | ಗಡಗಡ ಗುಟ್ಟಿಪ ವೇಷಗಳಿಂದ | ತಿವಿಯಲು ತವಕಿಪ ಶೂಲಗಳಿಂದ | ಜವಸಿರುವಂಕುಶ ಜಾಲಗಳಿಂದ | ಡಮರುಗಗದೆಗಳ ಗುಂಪುಗಳಿಂದ | ಕ್ರಮದಿ ಮುಸಲಗಳ ಪೆಂಪುಗಳಿಂದ | ಶಕ್ತಿಭಿಂಡಿವಾಲದ ಸಾಲಿಂದ | ಯುಕ್ತರಾದ ಭಟಸಂಕುಲದಿಂದ ||

ಸಿಂಧುರಾಜನ ರಾಜ್ಯದ ಹತ್ತಿರಕ್ಕೆ ಬಂದ ಈ ಸೇನೆಯನ್ನು ಸಿಂಧುರಾಜನ ಕಡೆಯವನಾದ ಹೇಮನೆಂಬ ರಾಕ್ಷಸನು ತಡೆದಾಗ ಗಣಪತಿಯು ಅವನೊಡನೆ ಯುದ್ಧವನ್ನು ಹೂಡಲು ಒಪ್ಪದೆ ಹೇಳಿದ್ದು—

ಶ್ಲೋ|| ಸ್ವಲ್ಪಸ್ನಾಯುವಸಾವಶೇಷಮಲಿನಂ ನಿರ್ಮಾಂಸಮಪ್ಯಸ್ಥಿಗೋಃ| ಶ್ವಾ ಲಬ್ಧ್ವಾ ಪರಿತೋಷಮೇತಿ; ನ ತು ತತ್ತಸ್ಯ ಕ್ಷುಧಾಶಾಂತಯೇ; || ಸಿಂಹೋ ಜಂಬುಕಮಂಕಮಾಗತಮಪಿ ತ್ಯಕ್ತ್ವಾ ನಿಹಂತಿ ದ್ವಿಪಮ್ | ಸರ್ವಂ ಕೃಚ್ಛ್ರಗತೋಽಪಿ ವಾಂಛತಿ ಜನಃ ಸತ್ವಾನುರೂಪಂ ಫಲಮ್ || —(ಸು)

ಅ|| ಹಸುವಿನ ಎಲುಬಿನಲ್ಲಿ ಮಾಂಸವಿಲ್ಲದೆ ಎಲ್ಲಿಯೋ ಅಷ್ಟಿಷ್ಟು ಸ್ನಾಯುವಸೆಗಳಿದ್ದರೂ ನಾಯಿಯು ಸಿಕ್ಕಿದ್ದಕ್ಕೇ ಸಂತೋಷಪಡುತ್ತದೆ. ಅದು ಅದರ ಹಸಿವೆಯನ್ನೇನೂ ಇಂಗಿಸುವುದಿಲ್ಲ. ಸಿಂಹವು ತನ್ನ ಕೈಗೆ ಸಿಕ್ಕಿದ ನರಿಯನ್ನು ಬಿಟ್ಟು ಆನೆಯನ್ನು ಹೊಡೆಯುವುದಲ್ಲವೆ? ಎಂಥ ಕಷ್ಟಗಳು ಒದಗಿದರೂ ಎಲ್ಲರೂ ತಮ್ಮ ತಮ್ಮ ಶೌರ್ಯಕ್ಕೆ ತಕ್ಕ ಫಲವನ್ನೇ ಅಪೇಕ್ಷಿಸುತ್ತಾರೆ

ಅದರಂತೆ ಗಣಪತಿಯು ತನ್ನ ಮುಂದೆ ಸಿಂಧುವನ್ನು ಹೊಗಳಿದ ಆ ಮುನಿಗೆ ಹೇಳಿದ್ದು—

ಅಠಾಣ—ಝಂಪೆ

ಬಿಡು ಬಿಡೀ ಬಗೆಯಾದ ನುಡಿಯನೀಗ || ಪ || ಕಡಿದು ಕೆಡಹುವೆನು ಸಿಂಧುವನು ಬೇಗ || ಅ ಪ || ಎಲ್ಲಿಯದಾ ಸಿಂಧುವಿನ್ನೆಲ್ಲಿ ನಿನ್ನಯ ಬಂಧು?| ನಿಲ್ಲಬಲ್ಲನೆ ಯುದ್ಧಗೈಯ್ಯಲಿಂದು? || ಬಲ್ಲಿದರ ಬಲ್ಲಿದನ ಬಿಲ್ಲ ಪೆಟ್ಟನು ತಿಂದು | ಸೊಲ್ಲಡಗುವುದು ಸೇನೆ ನೋಡುವೈ ಇಂದು || ೧ || ದುರುಳಸೇನೆಯನೆಲ್ಲ ಧರೆಗೆ ಬಲಿಯನೀಯುವೆನು; | ಶಿರವರಿದು ರಕ್ಕಸನ ಸಾಯಿಸುವೆನು; || ಸುರಸಮೂಹಕ್ಕೆಲ್ಲ ಬಿಡುಗಡೆಯ ಮಾಡುವೆನು; | ಧರಣಿಯೊಳು ಶಾಂತಿಯನು ನೆಲೆಗೊಳಿಪೆನು || ೨ ||

ಇಷ್ಟು ಹೇಳುವುದರೊಳಗೆ ಗಣಪತಿಯ ಸೈನಿಕರಾಗಲೇ ಕೈಮಾಡಲಾರಂಭಿಸಲು ನಂದಿಯು ಬಂದು ಅವರನ್ನು ತಡೆದು ದಂಡೋಪಾಯಕ್ಕೆ ಮೊದಲು ಸಾಮೋಪಾಯವನ್ನು ಮಾಡಿ ನೋಡದೆ ಬಿಡಬಾರದೆಂದು ಹೇಳಿದ್ದಕ್ಕೆ ಗಣಪತಿಯು ಸಮ್ಮತಿಸಿ ಅಭಿಪ್ರಾಯಪಟ್ಟದ್ದು—

ಶ್ಲೋ॥ ಮೇಧಾವೀ, ವಾಕ್ಪಟುಃ, ಪ್ರಾಜ್ಞಃ, ಪರಚಿತ್ತೋಪಲಕ್ಷಕಃ, । ಧೀರೋ, ಯಥೋಕ್ತವಾದೀ ಚ ಏಷ ದೂತೋ ವಿಧೀಯತೇ ॥ —(ಸು)

ಅ॥ ಬುದ್ಧಿವಂತನೂ ವಾಕ್ಚತುರನೂ ಚೆನ್ನಾಗಿ ತಿಳಿದವನೂ ಇಂಗಿತಜ್ಞನೂ ಸತ್ಯವನ್ನು ಹೇಳುವವನೂ ಆದವನು ದೂತನಾಗಿರುವುದಕ್ಕೆ ತಕ್ಕವನು

ಎಂದು ಅವನನ್ನೇ ಸಿಂಧುರಾಜನ ಬಳಿಗೆ ಅಟ್ಟಲು ಅವನು ಬಂದಾಗ ಸಿಂಧುರಾಜನ ಸಭೆಯಲ್ಲಿ ಯಾರೂ ಮಾತಾಡಿಸದಿರುವದನ್ನು ನೋಡಿ ಅವನು ತಾನೇ ಮುಂದೆ ನುಗ್ಗಿ ಹೇಳಿದ್ದು —

ಆ॥ ಹೆ, ಸಿಂಧುರಾಜ, ಸಭೆಯೊಳ್ । ನೀಂ ಸತ್ಕರಿಸದಿರೆ ಸಾಧುಜನರನ್ನು ॥ ದೋಷಾಸ್ಪದವಲ್ಲವೆ? ಮೃದು । ಭಾಷೆಗುಪ್ಪಿ ಸಜ್ಜನದಲ್ಲಿ ಒಡತನವೇ?

ಹೀಗೆ ಅವನನ್ನು ಎಚ್ಚರಗೊಳಿಸಿ ನಂದಿ ಹೇಳಿದ್ದು —

ಕಮಾಚು—ಆದಿತಾಳ

ನಾ ಹೇಳುವದ ಕೇಳು । ಸಿಂಧುರ ॥ ಪ ॥ ನೀ ಹುಚ್ಚುತನದಲ್ಲಿ ಹಾಳಾಗ ಬೇಡವೊ ॥ ಅ ಪ ॥ ದಿಟ್ಟತನವ ನೀನು ಬಿಟ್ಟಿರದಿದ್ದರೆ । ಕೆಟ್ಟುಹೋಗುವೆ ಬಹು ಕಷ್ಟಕ್ಕೆ ಗುರಿಯಾಗಿ ॥ ೧ ॥ ಶಿಷ್ಟರ ರಕ್ಷಣೆ, ದುಷ್ಟರ ಶಿಕ್ಷಣೆ, । ಸೃಷ್ಟಿಯೊಳ್ದೇವರ ನಿಷ್ಠೆಯಾಗಿರುವದು ॥ ೨ ॥ ಶರಣರಕ್ಷಕನೆಂಬ । ಬಿರುದುಂಟು ದೇವಗೆ; ॥ ಶರಣೆಂದೊಡನೆ ಬದು । ಕಿರುವೆ ನೀ ಚಿರಕಾಲ ॥ ೩ ॥

ಅದಕ್ಕೆ ಸಿಂಧುರಾಜನ ಉತ್ತರ—

ಆ॥ ನಿನ್ನೊಡೆಯಂ ಹುಡುಗಂ; ನೀ । ನೆನ್ನೆಂ ನೀಂ ಪಶುವೆ ಆಗಿ ಹುಟ್ಟಿರುವೆ; ॥ ಎನ್ನೊಳ್ಗೆಣಸುವದಂ ಬ । ಟ್ಟೆನ್ನಾದೊಡಮುಳಿಸಿಕೊಳ್ಳೆ ಬೇಡವನು ॥

ಆಗ ನಂದಿ ಅಲ್ಲಿಂದ ಎದ್ದು ಹೇಳಿದ್ದು —

ಆ॥ ಬಾಲನವನೆಂದುಪೇಕ್ಷಿಸಿ । ಲೀಲೆಯೊಳುನ್ಮತ್ತನಾಗಿ ಬರಿಯುವೆ ನೀಂ; ॥ ಹಾಳಾಗಿ ಹೋಗದಿರ್ಪೆಯ? । ನಾಳೆಯೆ ನೀನೆಮ್ಮ ಪಡೆಗೆ ಬಲಿಯಾಗಿ ॥

ಎಂದು ಹಿಂದಿರುಗುತ್ತಲೆ ಸಿಂಧುರಾಜನು ದಂಡಿನೊಡನೆ ಬಂದು ಗಣಪತಿಗೆ ಕಾಣಿಸಿಕೊಂಡು ಹೇಳಿದ್ದು —

ದಿಂ॥ ಅರಿಯದೇಕೈ ನೀನಿಲ್ಲಿ ನಿಂತುಕೊಂಡೆ? । ಧುರದಿ ನೀನೆನ್ನಂ ಕೆಣಕಬಲ್ಲ ಗಂಡೇ? ॥ ಹರಿಯ ಮುಂಗಡೆಯೊಳ್ ಕರಿಗದೇನು ಚಂದ? । ತೆರಳು ಹಿಂದಕ್ಕೇ ತಾಯ ಬಳಿಗೆ ಕಂದ ॥

ಎಂದು ಸಿಂಹನಾದವನ್ನು ಮಾಡಿ ರಾಕ್ಷಸೀಮಾಯೆಯಿಂದ ಗಣಪತಿಯ ಎಚ್ಚರವನ್ನು ತಪ್ಪಿಸಿ ಅವನನ್ನೂ ತನ್ನ ಸೆರೆಮನೆಗೆ ಸೇರಿಸಿದನು. ಗಣಪತಿಗೆ ಸಿಂಧುರಾಜನನ್ನು ಮಣಿಸುವ ಸಾಮರ್ಥ್ಯವಿದ್ದಾಗ್ಯೂ ಅವನು ಈ ಕಾರ್ಯಕ್ಕೆ ಹೊರಟಾಗ ಸಂಪ್ರದಾಯದಂತೆ ತಾಯಿತಂದೆಗಳ ಆಶೀರ್ವಾದವನ್ನು ಪಡೆಯದೆ ತನ್ನ ತೋಳಬಲದ ಮೇಲಿನ ಭರವಸದಿಂದಲೇ ಬಂದ ದುರಭಿಮಾನವು

ಅವನಿಗೆ ಈ ದುರವಸ್ಥೆಯನ್ನು ತಂದುಕೊಟ್ಟಿತು. ಈ ಪರಿಸ್ಥಿತಿಯನ್ನು ನೆನೆದು ದೊಡ್ಡವರು ಜನರಿಗೆ ಉಪದೇಶಿಸಿರುವುದೇನೆಂದರೆ—

ಮೋಹನ–ಝುಂಪೆ

ಮೆರೆವುದೇತಕೆ ? ನನಗೆ ಸರಿಯಿಲ್ಲವೆಂಬು । ಹರಿ ಸರ್ವಕರ್ತನೆಂದರಿಯದೇ ಬರಿದೆ ॥ ಪ ॥ ಸುತಂಪ ಶಕ್ತಿಯೊಳೆನಗೆ ಸರಿಯಿಲ್ಲನೆಂದಗ್ನಿ । ಬಡಬಡಿಸೆ ಹುಲ್ಲ ಕಡ್ಡಿಯನೊಂದನು ॥ ಇಡಲು ಹರಿ ನಿನ್ನ ಶಕ್ತಿಯ ತೋರೆನುತ್ತದನು । ಸುಡಲಾರದಾ ಅಗ್ನಿ ತಲೆಯ ತಗ್ಗಿಸಿದ ॥ ೧ ॥ ಹಾರಿಪುದರೊಳಗೆ ಬಲವಂತನೆನ್ನುತೆ ವಾಯು । ಸಾರುತಿರಲಾ ಹುಲ್ಲ ಕಡ್ಡಿಯನ್ನು ॥ ಹಾರಿಸೆಂದಿಡಲು ಹರಿ ಸರ್ವಶಕ್ತಿಯ ತೋರಿ । ಹಾರಿಸುವದಾಗದೇ ವಾಯು ಗಾರಾದ ॥ ೨ ॥ ಕೊನೆಗಿಂದ್ರನೇ ಬಂದು ನಿಂದೀಕ್ಷಿಸುತ್ತಿರಲು । ಕನಿಕರದಿ ಹರಿಯೊಂದು ರೂಪುದಾಳಿ ॥ ನಿನಗಾದ ಜಯವು ನನ್ನಿಂದಲ್ಲದಿನ್ನುಳಿದ । ಜಣಗುಗಳಿಗಳವಲ್ಲವೆಂದು ಪೇಳಿಹನು ॥ ೩ ॥ ದೇವತೆಗಳೆನಿಸಿಕೊಂಬರ ಪಾಡು ಹೀಗಿರಲು । ಭಾವಿಸಲು ನರರ ಪಾಡೇನು ಮಹಿಯೊಳ್ ॥ ಶ್ರೀಪಥೂಪರನೆ ಚಿದ್ರೂಪಿನೊಳು ತೋರದಿರ । ಲೀ ವಸುಧೆಯುಲ್ಲಾಳರದೇನ ಮಾಡುವರೋ ? ॥ ೪ ॥

ಇತ್ತ ಗಣಪತಿಗೊದಗಿದ ಸ್ಥಿತಿಯನ್ನು ನೆನೆದು ನಾರದರು ಅಲ್ಲಿಗೆ ಬಂದು ತಕ್ಕ ಸೂಚನೆಯನ್ನು ಕೊಡುತ್ತಲೆ ಗಣಪತಿಯು ಎಚ್ಚೆತ್ತು ತಂದೆಗೆ ಶರಣು ಹೋಗಿದ್ದಾನೆ—

ಚೂ॥ ದೇವತಾನೀಕಕ್ಕೆ ದೇವ ನೀನು, ಮನದಿ-ಭಾವಿಸಿದವರಿಗೆ ಬೆಂಬಲನು, ನೋಡ-ಲಾವಾಗಲುಂ ದಯಾಪಯನು, ಜನರ-ಕಾವ ದೇವರನು ಕಾವವನು, ಜಾವ-ಜಾವದಲಿ ಪೂಜೆಗೊಳ್ಳುವನು, ಜೀವ-ಜೀವರೊಳಗೆಲ್ಲ ನೆಲಸಿಹನು, ದುರಿತ-ದಾವಾಗ್ನಿಯೆನಿಸಿ ಮೆರೆವವನು, ದೊಡ್ಡ-ನಾವೆಯೆನೆ ಜನರ ದಾಟಿಪನು, ಜಗದ-ಪಾವನಾತ್ಮರಿಗೆ ಪಾಪನನು । ಕಡೆಗಂಡವರಿಗೆ ಭಯಪೀವ, ನಿನಗೆ-ಬಿಡದೆ ಶರಣೆನಲವರ ಕಾವೆ, ದುರುಳ-ರೊಡಲುಗಳಿಗೆಲ್ಲ ಗತಿ ನಾವೆ, ಸುಜನ-ರೆಡೆಬಿಡದೆ ಭಜಿಸುವರು ತಾವೆ । ತುಂಬು ನನ್ನೊಳಗೆ ಪೌರುಷವ, ದುರುಳ-ರಂಬುವರ ತುಳಿಯಕೊಡು ಬಲವ, ಮನದೊ-ಳಿಂಬುಗೊಂಡಿರುತೆ ತೋರೊಲವ, ಬರಿಯ-ಜಂಭಕ್ಕೆ ಕೊಡು ಪಲಾಯನವ, ನಿನ್ನ-ನ್ನಂಬಿದರ ಮರೆಯಬೇಡಭವ, ಹಲವು-ಹಂಬಲನು ಬಿಡಿಸಯ್ಯ ಶರ್ವ ॥

ಇಷ್ಟು ತಂದೆಗೆ ಶರಣೆನ್ನುವದರೊಳಗಾಗಿ ಗಣಪತಿಗೆ ಒಳಗೇ ವೀರಾವೇಶವು ಉಕ್ಕಿ ಬಂದಿದೆ. ಒಡನೆ ಅವನು ಸೆರೆಮನೆಯ ಬಾಗಿಲನ್ನೊದೆಯುತ್ತಲಿ ಅದು ಚೂರುಚೂರಾಗಿದೆ. ಕಾವಲಿಗರನ್ನೆಲ್ಲ ಕೊಚ್ಚುತ್ತ ಮುಂದೆ ಬರುತ್ತಿದ್ದಾನೆ—

ಶ್ಲೋ॥ ದೃಷ್ಟಿಸ್ತೃಣೀಕೃತಜಗತ್ತ್ರಯಸತ್ತ್ವಸಾರಾ, । ಧೀರೋದ್ಧತಾ ನಮಯತೀವ ಗತಿರ್ಧರಿತ್ರೀಮ್, ॥ ಕೌಮಾರಕೇಽಪಿ ಗಿರಿವದ್ಗುರುತಾಂ ದಧಾನೋ । ವೀರೋ ರಸಃ ಕಿಮಯಮೇತ್ಯುತ ದರ್ಪ ಏಷಃ ॥ —(ಸು)

ಆ॥ ಅವನ ದೃಷ್ಟಿಯು ಮೂರು ಲೋಕಗಳ ಸತ್ತ್ವಸಾರವನ್ನೂ ಹುಲ್ಲಿಗಿಂತ ಕಡೆಯಾಗಿ ನೋಡುತ್ತಿತ್ತು. ಧೀರತನದಿಂದ ಉದ್ಧತನಾದ ನಡಿಗೆಯು ಭೂಮಿಯನ್ನೇ ಬಗ್ಗಿಸುವ ಹಾಗಿತ್ತು. ಕುಮಾರಭಾವವಿದ್ದರೂ ಪರ್ವತದಂತೆ ಗುರುತ್ವವನ್ನು ಹೊಂದಿ ಕಾಣುತ್ತಿದ್ದ ಅವನು ಮೂರ್ತಿಮತ್ತಾದ ಸಾಕ್ಷಾದ್ವೀರರಸವೊ ಅಥವಾ ದರ್ಪವೋ ಎಂಬಂತೆ ಶೋಭಿಸಿದನು.

ಇಷ್ಟರಲ್ಲಿ ಬ್ರಹ್ಮನ ಮಗಳಾದ ಸಿದ್ಧಿದೇವಿಯು ಗಣಪತಿಗೆ ಜಯಪತ್ರವನ್ನು ತಂದು ಕೊಡಬೇಕೆಂದು —

ಸಾಂ॥ ಸಟೆಯಹಾಗೆ ಬಂದು ಸಿಂಧುವಿನರಮನೆಯೊಳು । ನಟಿಸಿ ಮೋಹವ ನುಂಟುಮಾಡಿ ॥ ದಿಟದಿ ಸಿದ್ಧಿಯು ಮನಬಾದುದಕೇಳಲು । ಬ್ಯಾಟೆಗೊಂಡಳು ತಾನು ಹಗೂಡಿ ॥

ರಾಜನು ಬೇಕಾದ್ದನ್ನು ಬೇಡೆನ್ನಲು ಸಿದ್ಧಿಯು ಬೇಡಿದ್ದು —

ಸಾ॥ ಬೇಡೆನು ನಿನ್ನನು ಬಹುಪನ್ನಗಳನು । ನೀಡೆಂದೀಸಭೆಯೊಳ್; ॥ ಬೇಡುವೆನೊಂದಮೃತದ ಗುಳಿಗೆಯುನದ । ನೀಡೆನಗೀ ಕ್ಷಣದೊಳ್ ॥

ಸಿಂಧುರಾಜನು ಮಾತಿಗೆ ಕಟ್ಟುಬಿದ್ದು ಅದನ್ನು ಕೊಟ್ಟು ನಿರ್ವೀರ್ಯನಾದನು ಯುದ್ಧವಾರಂಭವಾಗುತ್ತಲೆ ಗಣಪತಿಗೆ ಅನಾಯಾಸವಾಗಿಯೇ ಜಯವಾಯಿತು.

ಆ॥ ಮೊಳಗಿದವು ದೇವದುಂದುಭಿ; । ಬೆಳಗಿದರಾರತಿಯ ದೇವನಾರಿಯರು; ॥ ನಲವಿಂ ಗಂಧರ್ವರ್ ಪೂ । ಮಳೆಗರೆಯುತೆ ತನನನನವ ಹಾಡಿದರು ॥

ಆಮೇಲೆ ಗಣಪತಿಯು ದೇವತೆಗಳನ್ನೆಲ್ಲ ಸೆರೆಯಿಂದ ಬಿಡಿಸಿದನು. ಎಲ್ಲರೂ ಗಣಪತಿಯನ್ನು ಸ್ತೋತ್ರ ಮಾಡುತ್ತಾರೆ—

ಶಂಕರಾಭರಣ—ಅಟತಾಳ

ಕರುಣಿಸೋ । ಎನ್ನ । ಕರುಣಿಸೋ ॥ ಪ ॥ ಕರುಣಿಸೊ ಕರಿಮುಖದೇವ, ಸುರ । ರಾಸಮುಖ್ಯರಿಗೆ ಸಂಜೀವ, ! ಕೊಟ್ಟು । ಸಿರುತದಿ ಕರುಣದಿಂ ಕಾವ, ॥ ಆಹಾ ॥ ಗಿರಿಜೆಯಾತ್ಮಜ, ನಿಜಶರಣರ ದುರಿತವ । ಹರಿಸುತ ವಿಘ್ನವು ಬರದಂತೆಯು ಭಯವ ॥ ೧ ॥ ಅಂಬಾಶಕ್ತಿಸ್ವರೂಪ । ಪೂರ್ಣ । ಬಿಂಬಾಧರಸುಪ್ರತಾಪ, । ಸ್ವಾಮಿ, । ಲಂಬೋದರ. ನೀ ನಿರ್ಲೇಪ । ಸೇವೆ । ಗೊಂಬಂಥ ಸರಸಕಲಾಪ, ॥ ಆಹಾ ॥ ಶಂಭುಸಂಭವ, ಲಗ್ನಾ । ರಂಭಪ್ರಾರ್ಥನಪಾತ್ರ । ನೆಂಬ ಬಿರುದನಾಂತೆ ತುಂಬ ಹೇರಂಬ, ನೀ ॥ ೨ ॥ ಅಪ್ಪದುದಿಲ್ಲ ನಿನ್ನಿಂದ । ಕೈಯೊ । ಳಿಪ್ಪ ಪಾಶಾಂಕುಶ ಚಂದ । ತುಪ್ಪ । ದಪ್ಪ ಸಕ್ಕರೆ ಜೇನುತಿಂದಾ । ಮಿತಿ । ಇಪ್ಪುದುದರ ತುಂಬಿಬಂದ ॥ ಆಹಾ ॥ ವಿಪತ್ತುತರುತಡಿ ತಪ್ಪಿ ಥಪ್ಪನೆ ಬಿದ್ದು । ತಪ್ಪನೊಡೆದು ಹೊಟ್ಟೆ ಸರ್ಪ ಸುತ್ತಿದ ದೇವ ॥ ೩ ॥ ಶಶಿಯು ಕಂಡಾಗ ನಿಂದಿಸಲು । ನೋಡು । ತಸಮುಸಾಹಸಿ ನೀ ಕೋಪಿಸಲು । ಮುರಿ । ದೆಸೆವ ದಾಡೆಯ ಹೂಂಕರಿಸಲು । ಉರಿ । ಮಸಗಿತು ಪೆಸರಡಗಿಸಲು ॥ ಆಹಾ ॥ ವ್ಯಸನದೂರ ನೀ ದಾಡೆ ಎಸೆಯುವವಸ್ಯರೊಳ್ಸುರ । ರೆಸೆಯೆ ಪಾದದಲಿ ಶಾಪಿಸಿಯೆ ಬಿರುದನಾಂತೆ ॥ ೪ ॥ ಮೂಷಕಾಸನಕೋಟಿ

ಭಾಸ, । ಶರ್ವ-ರೀಶನ ಮನಸಿನುಲ್ಲಾಸ, । ನಿನ್ನ । ದಾಸರಿಗೆಲ್ಲ ಕೈಲಾಸ, । ವಿಶ್ವ । ವಾಸನೆ ಕೊಡುವ ವಿಲಾಸ ॥ ಅಹಾ ॥ ಶ್ರೀ ಸದಾಶಿವತತ್ತ್ವಕೋಶಪಂಜರ ಕೀರ । ಭೂಷಣ, ವಿಘ್ನನಾಶನ, ಪರಮೇಶ ॥ ೫ ॥ ಯುಕ್ತಿಯನರಿಯೆ ನಾ ನೋಡು, । ನಿನ್ನ । ಭಕ್ತಿಯೆಂಬುದು ಲೇಸಮಾಡು, । ಸುವೇ । ದೋಕ್ತಮೂರುತಿ ವಿಘ್ನದೂಡು, । ಕಾವ್ಯ । ದುಕ್ತಿಗಳಿಗೆ ಮತಿಯೀಡು ॥ ಅಹಾ ॥ ಭಕ್ತಪಾಲಕ ಪುರಂದರೇಶನ ದಾಸನ । ಭಕ್ತಿಗೊಲಿದ ನಿಜಶಕ್ತಿ ಶ್ರೀ ಗಣೇಶ ॥ —(ದಾ)

ಈ ರೀತಿಯಲ್ಲಿ ಗಣಪತಿಯ ವಿಜಯಶ್ರೀಯನ್ನು ವಿವರಿಸುತ್ತಲೇ ಬ್ರಹ್ಮನ ಮಕ್ಕಳಾದ ಬುದ್ಧಿ ಸಿದ್ಧಿಯರು ಗಣಪತಿಯನ್ನು ವರಿಸಿ ತಾವಾಗಿ ಕೈಹಿಡಿದರು. ಇದನ್ನರಿತೇ ಭಾಗವತೋತ್ತಮರು ಕೀರ್ತನಾರಂಭದಲ್ಲಿ **"ಧನ್ಯನೆಂದೆನಿಸುವನು"** ಎಂದು ಹೇಳಿದ್ದು.

---

# ಪಾರ್ವತೀಪರಿಣಯ

## ಪೀಠಿಕೆ—ಶಿವಭಕ್ತಿ

ಪೂರ್ವಿ—ಅಟತಾಳ

ಶಿವಭಕ್ತಿಯನು ಮಾಡು ಮಾಡಲೆ ಮನವೆ । ಭವತಾಪಹರವಾದುದಿನ್ನೊಂದ ಕಾಣೆ ॥ ಪ ॥ ವಿಷಯಂಗಳನು ಬಿಟ್ಟು ತಪವನು ಮಾಡು । ಮಿಸುಕದೆ ಮನದೊಳಗ ಭವನ ನೋಡು ॥ ದೆಸೆಗೊಟ್ಟು ಪೋಗಲು ಪಾಪದ ಬೀಡು । ವಿಷಕಂಠನಾಗಿಹ ಶಿವನೊಳು ಕೂಡು ॥ ೧ ॥

ಜಗತ್ತಿನಲ್ಲಿ ಸುಖಸಾಧನಗಳೆಂಬುವೆಲ್ಲ ದುಃಖದಲ್ಲಿಯೇ ಪರಿಣಮಿಸುತ್ತಿರುವದನ್ನು ಕಂಡೂ ಕಂಡೂ ಜನರು ಅವುಗಳ ಮುಂದೆಯೇ ಬಾಯಿನೀರು ಕರೆಯುವದನ್ನು ನೋಡಿ ನೀತಿಶಾಸ್ತ್ರಕಾರರು ಅವರಿಗೆ ನೆನಪುಗೊಟ್ಟಿರುವದೇನೆಂದರೆ—

ವೃ॥ ಸುಡುವುದಿದೆಂದು ಕಾಣದೆ ಪತಂಗಮದರ್ಚಿಗೆ ಬೀಳ್ಗೆ; ಮೀನು ಮುಂ । ಬಡಿಶದ ಮಾಂಸಮಂ ಸವಿಗೆ ಚುಚ್ಚುಗುಮೆಂಬುದ ಕಾಣದಕ್ಕಟಾ! ॥ ಕೆಡುಕನೆ ಮಾಳ್ಪುವೀ ವಿಷಯಗಳ್ ಕಡೆಗೆಂಬುದ ಕಂಡು ಕೇಳಿಯುಂ । ಬಿಡೆವ ವನಕ್ಕಟೆಮ್ಮಯ ವಿಮೋಹಮಹತ್ತ್ವವನೇನನೆಂದಪ್ಪೆ ? ॥ —(ಭ. ವೈ.)

ಟಿ॥ ಅರ್ಚಿಗೆ—ಉರಿಗೆ. ಬಡಿಶ—ಗಾಳ.

ಯಾರು ಈ ವಿಷಯಗಳ ಸೆಳೆತಕ್ಕೆ ಸಿಕ್ಕದೆ ಇರುವರೆಂದರೆ—

ವೃ॥ ಮಾಯೆಯ ದೋಷವೆಂಬ ಗಿರಿಗಳ್ಗೆ ಸುರೇಶ್ವರನಾಯುಧಂಗಳೀ । ಮಾಯೆಯ ದೋಷವೆಂಬ ತರುಗಳ್ಗೆ ಕರಾಳಪರಶ್ವಧಂಗಳೀ ॥ ಮಾಯೆಯ

ದೋಷವೆಂಬ ಕರಿಗಳ್ಗೆ ಮೃಗಾಧಿಪರೆಂಬ ಕೀರ್ತಿಯುಂ। ಕಾಯುದೊಳಾಂತವರ್ಘ ವದುದಾರಕೃಪಾಹೃತರ್ಶೈ ಸದಾಶಿವ ॥ —(ಸ ಶಿ. ಶ)

ಟಿ॥ ಕರಾಳಪರಶ್ವಧಂಗಳ್—ಹರಿತವಾದ ಕೊಡಲಿಗಳು

ಶಿವನ ಸರ್ವೋತ್ಕೃಷ್ಟತೆಯನ್ನು ಕುರಿತು ಮತ್ತೊಬ್ಬ ಕವಿ ಹೇಳಿರುವದೇನೆಂದರೆ—

ವೃ॥ ಕಪಿಯೇ ಸರ್ವರೊಳುತ್ತಮಂ, ಕನಕವೇ ಲೋಹಂಗಳೊಳ್ ಶ್ರೇಷ್ಠ, ಜಾ। ಹ್ನವಿಯೇ ತೀರ್ಥದೊಳುನ್ನತಂ, ಗರತಿಯೇ ಸ್ತ್ರೀಜಾತಿಯೊಳ್ ವೆಗ್ಗ ಳಂ, ॥ ರವಿ ಮುಖ್ಯಂ ಗ್ರಹವರ್ಗದೊಳ್, ರಸಗಳೊಳ್ ಶೃಂಗಾರವೇ ಜಲ್ಮೆ, ಕೇಳ್। ಶಿವನೇ ದೇವರೊಳುತ್ತಮಂ, ಹರಹರಾ ಶ್ರೀಚೆನ್ನಸೋಮೇಶ್ವರ ॥ —(ಸೋ. ಶ)

ಇದೇ ಅರ್ಥವನ್ನು ಜ್ಞಾನಿಗಳು ಉಪದೇಶಿಸಿರುವದೇನೆಂದರೆ—

ಕಮಾಚು—ಆದಿತಾಳ.

ಇನ್ನಾದರೆಯು ನೀ ನೆನೆಯಲೊ ಪರಶಿವನ। ಮನವೆ ॥ಪ॥ ಮುನ್ನಿನಂತೆ ನೀ ಬನ್ನಬಡದೆ ಮುನಿ। ಪನ್ನಗನ ಪದೆ ಧನ್ಯನೆನಿಸು ॥ ಅ ಪ ॥ ನೂರಾರು ಯೋನಿಯ ಸಾರಿ ಭವದೊಳು। ಘೋರಿ ನೊಂದೆಯಲ್ಲ! ಬಹಳ ॥ ಪುರಾರಿನಾಮವು ಪುರಾತ್ತದುರಿತವ। ನುರಿಸಿ ಬೂದಿಗೈದಿರಿಸುವಗಲೆ ॥ ೧ ॥ ದೇಹಧರ್ಮಕರ್ಮಗಳ ಮಮತೆಯ। ಸಾಹಸದಿಂ ಜನಿಸಿಗಳ ॥ ಬಾಹುದವಿದ್ಯಾಮೋಹದಹಂಮಮ। ತಾಹರನಾ ಹರನೋರ್ವನೆಂದು ॥ ೨ ॥ ಶಂಕರಪದದಲ್ಲಿಂಬು। ಭವದೆ ಭ। ಯಂಕರತಾಪಕೆ ಕೂರಂಬು ॥ ಸಂಕಟಜನಿಮೃತಿಯಂ ಕಾಣದ ಬಲು। ಬಿಂಕದ ತಾಣದ ಲೆಂಕನಹೆಯೊ ॥ ೩ ॥ —(ಅ. ಗೀ)

ಟಿ॥ ಬನ್ನ—ಭಂಗ. ಭವ—ಸಂಸಾರ. ಪುರಾತ್ತ—ಹಿಂದೆಪಡೆದ. ಜವ + ನಿಗಳ—ಯಮನಿಂದಾಗುವ ಬೇಡಿ. ಬಾಹುದು( + ಅವಿದ್ಯಾಮೋಹದ+ಅಹಂಮಮತಾಹರನು)ಬರುವದು. ಇಂಬು—ಆಶ್ರಯ. ಕೂರಂಬು—ಕ್ರೂರವಾದ ಬಾಣ. ಜನಿ—ಹುಟ್ಟುವದು. ಬಿಂಕ—ಗರ್ವ. ತಾಣ—ಸ್ಥಾನ. ಲೆಂಕ—ಭಟ.

ಆ ಶಿವಭಕ್ತಿಯು ಎಷ್ಟು ಮಟ್ಟಿಗೆ ಮ್ಮಗೂಡಿರಬೇಕೆಂದರೆ—

ವೃ॥ ದುರಿತಂ ತೀರ್ದೊಡೆ ಪುಣ್ಯದೊಳ್ಳಿಲುವನಾ ಪುಣ್ಯಂ ಕರಂ ತೀರ್ದೊ ಡಾ। ದುರಿತಂಬೊಂದುವನಿತ್ಯಲತ್ತಲೆಡೆಯಾಟಂ ಕುಂದದಾತ್ಮಂಗವಂ ॥ ಸರಿ ಗೊಂಡಾತ್ಮವಿಚಾರವೊಂದರೊಳೆ ಸಿಂಡಾಸಂದಿಸುತ್ತಿರ್ಪನೇ। ಸ್ಥಿರನಕ್ಕುಂ ಸುಖಿಯಕ್ಕುಮಕ್ಷಯನಲಾ! ರತ್ನಾಕರಾಧೀಶ್ವರಾ ॥ —(ರ ಶ.)

ಶಿವಭಕ್ತಿಯ ಪ್ರಭಾವವನ್ನು ಕವಿ ಹೊಗಳಿರುವದೇನೆಂದರೆ—

ತ್ರಿ॥ ತೆಪ್ಪವನು ನಂಬಿದಡೆ ತಪ್ಪದೇ ತಡಿಗಹುದು;। ಸರ್ಪಭೂಷಣನ ನಂಬಿದಡೆ ಭವಭಯ। ತಪ್ಪಿಹೋಗುವದು ಸರ್ವಜ್ಞ ॥ —(ಸ. ಪ.)

ಆದ್ದರಿಂದಲೇ ಮುಮುಕ್ಷುಗಳು ಬಯಸುವದೇನೆಂದರೆ—

ತ್ರಿ॥ ಭಕ್ತಿಗೆರಡಕ್ಕರವು, ಮುಕ್ತಿಗೆರಡಕ್ಕರವು। ಭಕ್ತಿಯಿಂ ಮುಕ್ತಿ ಪಡೆವರೆ ಬಿಡದೆ ಆ । ರಕ್ಕರವ ಹೇಳೊ ಸರ್ವಜ್ಞ ॥ —(ಸ. ಪ.)

ಟಿ॥ ಆರಕ್ಕರ—ಈಶ್ವರನ ಆರಕ್ಷರದ ಮಂತ್ರ.

ಆದ್ದರಿಂದ ಶಿವನಿಗೆ ಶರಣು ಹೋಗಬೇಕಾದ್ದೆಂತೆಂದರೆ—

ಕಲ್ಯಾಣಿ—ರೂಪಕ

ಈಶಾ ವಿಶ್ವೇಶ ಪೊರೆ । ಗಾಸಿಯಾಗಿರುವೆ ॥ ಪ ॥ ಬರಿಯ ದುಃಖವೆಂಬ ಜಲದ । ಶರಧಿಯೊಳಗೆ ಮುಳುಗಿ । ಜರೆಯು ಮರಣವಾದಿಯಾದ । ಹಿರಿಯ ಮೊಸಳೆಗಳಿಗೆ ಸಿಕ್ಕಿ ॥ ಅರಿಯದೆ ಅದರಾದಿಯನ್ನು ಅರಿಯದೆ ಅದರಂತವನ್ನು । ಅರಿಯದೆ ಅವಲಂಬನವನು । ನೊರಗಿ ಕೊರಗುತಿಹೆನು ನಾನು ॥ ೧ ॥ ವಿಷಯೇಂದ್ರಿಯಜನಿತವಾದ । ವಿಷವನಮೃತವೆನುತ । ಬಿಸಿಯುಸಿರನು ಬಿಡುತಿರುತ । ಅಶನವಾಗಿ ಮಾಡಿಕೊಂಡು ॥ ಮುಸುಗುವ ಬಯಕೆಯ ಗಾಳಿಯ । ದೆಸೆಯಿಂ ಕಲ್ಲೋಲವಾಗಿ । ಬುಸುಗುಟ್ಟುವನರ್ಥದ ಬಹು । ವಿಷದಲೆಯಂ ತಾಳಲಾರೆ ॥ ೨ ॥ ಪರಿಪರಿಗೋಳುಗಳು ಭೋ । ಗರೆಯೆ ಶರಣುಬಂದೆ । ಪರಗುಣಪಾಥೇಯವಿಟ್ಟು । ನೆರೆ ಸುಜನರ ಜೊತೆಯ ಕೊಟ್ಟು ॥ ಕರುಣದಿ ಚಿನ್ಮಯ ನಾವೆಯೊಳಿರಿಸಿ ಮೋಕ್ಷತೀರಕೆನ್ನ । ತರುತಲಿ ಸಂಸಾರದ ಸಾ । ಗರದಿಂದಲಿ ಪಾರುಮಾಡು ॥ —(ಭಕ್ತಿ. ಗೀ.)

ಶರಣುಹೋಗಬೇಕಾದ ಶಿವನ ಮೂರ್ತಿಯನ್ನು ಕುರಿತು ಕವಿ ಚಮತ್ಕಾರವಾಗಿ ಹೇಳಿರುವುದೇನೆಂದರೆ—

ಶ್ಲೋ॥ ಪಾರ್ವತೀಫಣಿಬಾಲೇಂದುಭಸ್ಮಮಂದಾಕಿನೀಯುತಾ । ಪವರ್ಗರಚಿತಾ ಮೂರ್ತಿರಪವರ್ಗಪ್ರದಾಯಿನೀ ॥ —(ಸು)

ಅ॥ ಪಾರ್ವತಿ, ಫಣಿ, ಬಾಲೇಂದು, ಭಸ್ಮ, ಮಂದಾಕಿನೀ- ಇವುಗಳಿಂದ ಕೂಡಿದ ಶಿವನು ಪವರ್ಗದಿಂದ ಕೂಡಿದ ಮೂರ್ತಿಯಾದರೂ ಅಪವರ್ಗವನ್ನು ಎಂದರೆ ಮೋಕ್ಷವನ್ನು ಕೊಡುವವನು.

ಅನ್ಯದೇವತೆಗೆ ಶರಣುಹೊಗುವದರ ತುಚ್ಛತ್ವವೆಂತೆಂದರೆ—

ಶ್ಲೋ॥ ತ್ವಯಿ ಸತಿ ಶಿವ ದಾತರ್ಯಸ್ಮದಭ್ಯರ್ಥಿತಾನಾ । ಮಿತರಮನುಸರಂತೋ ದರ್ಶಯಂತೋಽರ್ಥಿಮುದ್ರಾಮ್ ॥ ಚರಮಚರಣಘಾತೈರ್ದುರ್ದುಹಂ ದೋಗ್ಧುಕಾಮಾಃ । ಕಲಭಮನುಸರಾಮಃ ಕಾಮಧೇನೌ ಸ್ಥಿತಾಯಾಮ್ ॥ —(ಸು)

ಅ॥ ನಾವು ಬೇಡಿದ್ದನ್ನು ಕೊಡುವುದಕ್ಕೆ ನೀನಿರುವಾಗ ಇನ್ನೊಬ್ಬರ ಮುಂದೆ ಬೊಗಸೆಯನ್ನೊಡ್ಡುವದು ಕಾಮಧೇನುವನ್ನು ಬಿಟ್ಟು ಕೊನೆಗಾಲಿನಿಂದ ಒದೆದು ಹಾಲುಕೊಡದೆ ಇರುವಂಥ ಮರಿಯಾನೆಯನ್ನಾಶ್ರಯಿಸಿದಂತಾಗುತ್ತದೆ.

ಶಿವಭಕ್ತಿಯನ್ನು ಮಾಡುವುದಕ್ಕಾದರೂ ಒಳ್ಳೆ ದೃಢಪ್ರಯತ್ನವು ಬೇಕೆಂದು ಒಬ್ಬ ಕವಿಯೇ ನೆನಪುಗೊಟ್ಟಿರುವದೇನೆಂದರೆ—

ವೃ॥ ಎಲೆ ಮನ, ಜಗತ್ಖ್ಯಾತನಹ ಚಿದಂಬರಶಿವನ-ಬಳಿಗೈದಿ ಪಾಳ್ವೆಯೇನು ? । ಮಲೆತಿತ್ತು ಹಾಯುವದು; ಹಾವು ಕಚ್ಚುವದು; ಮು-ತ್ತುಳಿದು ಮುಂದೈದೆ ನೀನು ॥ ಸಲೆ ಮುತ್ತುವವು ಪಿಶಾಚಿಗಳ ಸಂದಣಿಯು ಹೆ-ದ್ದಲೆಯ ಭೂತಗಳ ಹಿಂಡು; । ಸೆಳೆವುವವು ಮಸಣಕಾದೊಡಮವನ ಬಿಡೆವೆಂದು-ಬಲುಹಿಂ ನಡೆಯಬಲ್ಲೆಯ ? —(ಹ. ಹಂ)

ಅದೇ ಕವಿಯೇ ಶಿವಭಕ್ತಿಯಿಲ್ಲದವನ ಸ್ಥಿತಿಯನ್ನು ಸೂಚಿಸಿರುವದೇನೆಂದರೆ—

ವೃ॥ ಗಂಗೆಯನು ತುಂಬೆಹೂವನು ಮುಡಿದು ಬಂಗಾರ-ದಂಗಳದಿ ಕುಣಿಪ ಶಿವನ। ಉಂಗುಟವ ಪೂಜಿಸದವನ ಗುರ್ತ ಪೇಳ್ವೆ ಕೇ-ಳ್ಕಂಗೊಳಿಸುತಿರ್ಪ ಹದನ॥ ಹಂಗೇನವನಸದನ್ನದಾವಿಯುಂ ಸಿಗದೆ ಸುಖ-ಸಂಗವಿರದವನನುದಿನ । ಬೆಂಗೊಂದು ಬಟ್ಟೆಯಿಲ್ಲದೆ ಭಿಕ್ಷೆಹುಟ್ಟದಿಹ-ಕಂಗಾಳಿಯವನು ದೀನ ॥ —(ಹ. ಹಂ)

ಆದುದರಿಂದ ಒಬ್ಬ ಭಕ್ತನು ಶಿವನನ್ನು ಬೇಡಿಕೊಂಡಿರುವದೇನೆಂದರೆ—

ಮುಖಾರಿ—ಝಂಪೆ

ಯಾಕೆ ದಯವನು ಮಾಡೆ ಹೇ ಸಾಂಬ, ಶಿವನೇ । ಲೋಕರಕ್ಷಕನೆಂಬ ಬಿರುದ ಪೊಗಳಿಸಿಕೊಂಡು ॥ ಪ ॥ ವಾಸವೇ ಕೈಲಾಸ; ವಸನವೇ ಗಜಚರ್ಮ;। ವಾಸುದೇವನೆ ಮಿತ್ರ; ವಧುವೆ ಗಿರಿಜೆ; ॥ ವಾಸುಕಿಯೆ ಆಭರಣ; ವಸುಧೆಯೇ ರಥವೆಂಬ । ಈಸುಗರ್ವದೊಳೆನ್ನ ಮರೆತೆಯೊ ? ಮಹಾದೇವ ॥ ೧ ॥ ಸಾರಥಿಯೆ ಬ್ರಹ್ಮ; ಮಹಮೇರುವೇ ಧನುವಿದಕೆ । ನಾರಾಯಣಾಸ್ತ್ರ; ನಾಗೇಂದ್ರ ಸೂತ್ರ; ॥ ಈ ರೀತಿಯಲಿ ಮೂರು ಪುರವ ಜಯಿಸಿರುವಹಂ । ಕಾರದಿಂದೆನ್ನ ಮರೆತೆಯೊ ? ಮಹಾದೇವ ॥ ೨ ॥ ಬಡವನೊಡನೇಕೆನಿತು ಕಡುಹ ತೋರಿದೆ? ಶಿವನೆ, । ಬಿಡದೆನ್ನ ಕಾಯೊ; ಮನದಿಷ್ಟಾರ್ಥವೀಯೋ; ॥ ಮೃಡನು ನೀನಲ್ಲದಿನ್ನಾರುಂಟು ? ಈ ಜಗಕೆ । ರಜತಪುರವಾಸ, ಶ್ರೀಚಂದ್ರಮೌಳೀಶ ॥ ೩ ॥ —(ದಾ)

ಇದನ್ನೆಲ್ಲ ನೋಡಿಯೇ ಭಾಗವತೋತ್ತಮರು ಕೀರ್ತನಾರಂಭದಲ್ಲಿ **"ಶಿವಭಕ್ತಿಯನು ಮಾಡು ಮಾಡೆಲೆ ನರನೆ"** ಎಂದುಪದೇಶಿಸಿರುವರು. ಆ ಶಿವಭಕ್ತಿಗೆ ಉದಾಹರಣೆಯಾಗಿ ಈಗ ಪಾರ್ವತೀಪರಿಣಯನೆಂಬ ಆಖ್ಯಾನವು ನಿರೂಪಣಮಾಡಲಾಗುವದು.

---

## ಆಖ್ಯಾನ

ಕೀ॥ ಓಷಧಿಪ್ರಸ್ಥಪುರದಿ ಗಿರಿರಾಜನು । ಲೇಸೆನೆ ಮೇನೆಯನೊಡಗೂಡಿ ॥ ಭಾಸಿಸುತಿರ್ದನು ನಾನಾವಿಧದ ವಿ। ಲಾಸಗೊಳುತ ಮೆರೆದಿರೆ ಗಾಡಿ ॥

ಟಿ|| ಗಾಡಿ—ಸೊಬಗು.

ಆ ಪರ್ವತನನ್ನು ಅನೇಕ ಮುನಿಗಳು ಆಶ್ರಯಿಸಿದ್ದದ್ದನ್ನು ನೋಡಿ ಕವಿ ವರ್ಣಿಸಿರುವದೇನೆಂದರೆ—

ವೃ|| ಇದು ಭೂಮಿಸ್ಥಾನದಿಂ ಮುಕ್ತಿಗೆ ನಡೆಯಿಪ ನೀಲಾಶ್ಮಸೋಪಾನಮಾಹಾ! || ಇದು ಸಂಸಾರಾತಪಶ್ರಾಂತರೊಳತಿಸುಖಮೀವಂಬುದಶ್ರೇಣಿ; ಮೇಣಿಂ || ತಿದು ದುಷ್ಕರ್ಮಾಬ್ಜಷಂಡಂಗಳನುರೆ ಕೊರಗಿಪ್ಪೊಂದು ನೀಹಾರಮೆಂಬಂ| ದದೆ ಹೋಮಸ್ತೋಮಧೂಮಂ ನೆಗೆದುದು ಮುನಿಗಳ್ಮಾಳ್ಪ ಮಂತ್ರಾಗ್ನಿಯಿಂದಂ || —(೧. ೪)

ಇಂಥ ಪ್ರಾಂತದಲ್ಲಿ ಆ ಗಿರಿರಾಜನ ವೈಭವವೆಂತಿತ್ತೆಂದರೆ—

ವೃ|| ಎರಗದ ಭೂಪರಿಲ್ಲ; ಬೆಸಕೈಯದ ರಾಜಕುಮಾರರಿಲ್ಲ; ಕೂ| ರ್ತರಿಯದ ಪೆಣ್ಗಳಿಲ್ಲ; ತಲೆವಾಗದ ಚಾಗಿಗಳಿಲ್ಲ; ತಳ್ತು ಕು| ಕ್ಕುರಿಸದ ವೀರರಿಲ್ಲ; ಸತರಾಗದ ಬಲ್ಲಿದರಿಲ್ಲ; ಕೀರ್ತಿಯಿಂ| ತುರುಗದ ದಿಕ್ಪ್ರತಾನಮಣಮಿಲ್ಲೆನೆ ಬಾಳ್ವನಗಾಧಿನಾಯಕಂ || (೧. ೫)

ಟಿ|| ಬೆಸಕೈ-ಹೇಳಿದ್ದನ್ನು ಮಾಡು. ಕೂರ್ತರಿಯದ-ಪ್ರೀತಿಸುವುದಕ್ಕೆ ತಿಳಿಯದೇ ಇರುವ. ಚಾಗಿ-ತ್ಯಾಗಿ ತಳ್ತು-ಹೋರಾಡಿ. ಅಣಂ-ಸ್ವಲ್ಪವೂ. ಬಾಳ್ವಂ+ಅಗಾಧಿನಾಯಕಂ.

ಹೀಗಿದ್ದ ರಾಜದಂಪತಿಗಳಿಗೆ ಬಹುಕಾಲ ಮಕ್ಕಳಿಲ್ಲದ್ದರಿಂದ ಮೇನೆಯು ಆದಿಶಕ್ತಿಗೆ ಶರಣು ಹೋದದ್ದೆಂತೆಂದರೆ—

ಚೂ|| ಸರ್ವತೀರ್ಥಾತ್ಮಿಕೇ, ಸರ್ವಮಂತ್ರಾತ್ಮಿಕೇ, ಸರ್ವತಂತ್ರಾತ್ಮಿಕೇ, ಸರ್ವಯಂತ್ರಾತ್ಮಿಕೇ, ಸರ್ವಶಕ್ತ್ಯಾತ್ಮಿಕೇ, ಸರ್ವಪೀಠಾತ್ಮಿಕೇ, ಸರ್ವತತ್ತ್ವಾತ್ಮಿಕೇ, ಸರ್ವವಿದ್ಯಾತ್ಮಿಕೇ, ಸರ್ವಯೋಗಾತ್ಮಿಕೇ, ಸರ್ವನಾದಾತ್ಮಿಕೇ, ಸರ್ವಶಬ್ದಾತ್ಮಿಕೇ, ಸರ್ವವಿಶ್ವಾತ್ಮಿಕೇ, ಸರ್ವದೀಕ್ಷಾತ್ಮಿಕೇ, ಸರ್ವಸರ್ವಾತ್ಮಿಕೇ, ಸರ್ವಗೇ, ಪಾಹಿ ಮಾಂ; ಪಾಹಿ ಮಾಂ; ಪಾಹಿ ಮಾಂ; ದೇವಿ, ತುಭ್ಯಂ ನಮೋ; ದೇವಿ, ತುಭ್ಯಂ ನಮೋ; ದೇವಿ, ತುಭ್ಯಂ ನಮಃ || —(ದಾ)

ಸುರಟಿ — ಅಟತಾಳ

ಮಂಗಲಂ ಮಂಗಲಂ| ಭುವನೇಶ್ವರಿ| ಮಂಗಲಂ ಮಂಗಲಂ || ಪ || ಮಂಗಲಂ ಲಂಕಾಪುರವರ ಶಾಂಕರಿ| ಮಂಗಲಂ ಕಂಚೀಕಾಮಾಕ್ಷೀ ದೇವೀ || ಮಂಗಲಕರವೀರಮಹಾಲಕ್ಷ್ಮಿ ಸು| ಮಂಗಲಕೋಲಾಪುರಮೂಕಾಂಬಿಕೆ || ೧ || ದೇವಿ, ಕ್ರೌಂಚದ್ವೀಪೇಶ್ವರಿ ಚಾಮುಂಡಿಕೆ| ಪಾವನಕಾಶೀಮಂಗಲಗೌರಿಕೆ || ಭೂವರಾಲಂಪುರಾಲಯ ಜೋಗುಳಾಂಬಿಕೆ| ಪಾವಿತಲೋಕಶ್ರೀಶೈಲಭ್ರಮರಾಂಬಿಕೆ || ೨ || ಚಿತ್ರಕೂಟಾಶ್ರಿತಮಾಣಿಕ್ಯಾದೇವಿ ಪ| ವಿತ್ರಪ್ರಯಾಗವಾಸಿನಿ ಮಾಧವಿ || ಕ್ಷೇತ್ರೋತ್ತಮ ಹಿಂಗುಳಾನಿಲಯೈಂಕಾರಿ | ಕ್ಷೇತ್ರೇಶಿ ಪೈಠಣೀಪುರಪೀಠರೂಪಿಣಿ || ೩ || ಉಡ್ಯಾಣನಿಲಯ ವಿಜಯಾದೇವಿ ನಿಖಿಲಮು| ನೀಡ್ಯಾಹಿಕ್ಷೇತ್ರ

ಸ್ಥಕಾಲರೂಪಿ ‖ ಈಡ್ಯೇ ತುಲಜಾಪುರನಿಲಯೆಭವಾನಿ ದೇ।ವೇಡ್ಯವಂದಿತಮಧುರೇಶ್ವರಿ ವಿಶಾನಾಕ್ಷಿ ‖ ೪ ‖ ಇಷ್ಟಜ್ವಾಲಾಮುಖಿನಿಷ್ಠಮಹಾಜ್ವಾಲೆ। ಪುಷ್ಟಾತ್ಯತ್ರೀಯಕರಾಥಲಕ್ಷ್ಮೀ ‖ ಅಷ್ಟಾದಶಪೀಠಶ್ರೇಷ್ಠವಾಸಿಭಕ್ತಾ।ಭೀಷ್ಟಧಾತ್ರಿಜಗದ್ಧಾತ್ರಿ ಸವೋಽಸ್ತು ತೇ ‖ ೫ ‖ —(ದಾ)

ಆದಿಶಕ್ತಿಯ ಅನುಗ್ರಹದಿಂದ ಮೇನೆಯು ಗರ್ಭಿಣಿಯಾಗಿದ್ದಾಳೆ—

ಭಾ‖ ಜಲಜಮಿತ್ರನ ಬಿಂಬವನು ಮಾ।ರ್ತಳೆದ ಸರಸಿಯೊ, ಸಾರವಿದ್ಯು।ಜ್ಜ್ವಲಿತಮೇಘವೊ, ಮೇಣು ವಿಮಲಬ್ರಹ್ಮವಿದ್ಯೆಯನು ‖ ತಿಳಿದ ತತ್ತ್ವಜ್ಞಾನನಿಷ್ಠನ।ಲಲಿತತನುವೋ ಎನಲು ಮೇಣಾ।ಲಲನೆ ಬೆಳೆದಳು ದಿವ್ಯಗರ್ಭದ ಬಹಳ ತೇಜದಲಿ ‖ —(ಕ. ಭಾಗ)

ಪಾರ್ವತಿಯ ಜನನವಾದದ್ದು—

ಕಂ‖ ರತಿ ನೆಲನುಗ್ಗಡಿಸೆಯರುಂ।ಧತಿ ಕೈಗುಡೆ, ಸುಖವನ್ನೈದೆ ಸಾವಿತ್ರಿ, ಸರ।ಸ್ವತಿ ಪೊಗಳೆ, ಶಚಿ ನಲಿಯೆ, ಪಾ।ರ್ವತಿ ಮೇನೆಯ ಗರ್ಭನಿಲಯದಿಂ ಪೊರಮಟ್ಟಳ್ ‖ —(ಗಿ. ಕ)

ಬಿದಿಗೆಯ ಚಂದ್ರನಂತೆ ಬೆಳೆದ ಆ ಕನ್ಯೆಯ ವಿವಾಹದ ವಿಚಾರವಾಗಿ ಪರ್ವತರಾಜನು ಯೋಚಿಸುತ್ತಿರುವಾಗ ನಾರದರು ಬಂದು ಹೇಳಿದ್ದು—

ಚೌ‖ ಹುತವಹನನುಳಿದನ್ಯರಮಲಾ-ಹುತಿಗೆ ತಕ್ಕವರೆನಿಪರೆ?।ಅತುಲಶಶಿಯನು ಬಿಟ್ಟು ಚಂದ್ರಿಕೆ-ಗಿತರಗತಿಯನು ಕಾಣ್ಬರೇ? ‖ ಸುತೆಗೆ ಸುರವರಮೌಳಿಮಣಿಪೂ-ಜಿತಪದಾಂಬುಜನಲ್ಲದೆ । ಪತಿಯೆನಿಸೆ ಬೇರೊಬ್ಬನರ್ಹನೆ?-ಹಿತವಿದನು ತಿಳಿ ತಪ್ಪದೆ ‖

ಆಗ ಪರ್ವತರಾಜನು—

ಕೀ‖ ಜಯವಿಜಯೆಯರಿಬ್ಬರು ಸಖಿಯರು ಬರೆ।ನಯದಿಂ ಸುತೆಯನು ಕರೆದೊಯ್ದು ‖ ದಯದಿ ಹೇಮಕೂಟಕೆ ಶಿವನಲ್ಲಿಗೆ।ಜಯವೆಂದಿಳಿದನು ತಾನೊಲಿದು ‖

ಅಲ್ಲಿ ಅವನು ಪಾರ್ವತಿಗೆ ಹೇಳಿದ ಬುದ್ಧಿವಾದ—

ವೃ‖ ಅನುಪಮನಿರ್ದನಿರ್ದನೆ ಶರಣ್ಬುಗು; ಶಾಶ್ವತಮೂರ್ತಿಯಿರ್ದನಿ।ರ್ದನೆ ನಡೆನೋಡು; ಚಂದ್ರಧರನಿರ್ದನೆ ನಂಬು; ನಿಜೇಶನಿ ‖ ರ್ದನೆ ಪರಿಭಾವಿಸಪ್ರತಿಮನಿರ್ದನೆ ಕೀರ್ತಿಸು; ಶಂಭುವಿರ್ದನಿ।ರ್ದನೆ ಪದೆದರ್ಚಿಸರ್ಚಿಸೊಲವಿಂದವೆ ಪಾರ್ವತಿ ಹಂಪೆಯೊಳ್ದನಂ ‖ —(ಗಿ. ಕ)

ಅಲ್ಲಿ ಅಂತರ್ಮುಖನಾಗಿದ್ದ ಶಿವನನ್ನೊಲಿಸಿಕೊಳ್ಳುವುದಕ್ಕಾಗಿ ಪಾರ್ವತಿ ತಪಸ್ಸಿಗೆ ನಿಂತು ಬೇಡಿದ್ದು—

ಕಾಪಿನಾರಾಯಣಿ—ಅಟತಾಳ

ಸೆರಗನೊಡ್ಡಿ ನಾನು ಬೇಡಿಕೊಳ್ಳುವೆನು।ಹರನೆ; ನನ್ನ ಸೇವೆ ಕೈಕೊಳ್ಳೊ ನೀನು ‖ ಪ ‖ ಶರಣು ಬಂದ ನನ್ನ ಹೃದಯಕಮಲದಿ।ಹರುಷದಿಂದ ನೀನು ಕುಳ್ಳಿ

ರೆನುತಲಿ ॥ ಅ. ಪ ॥ ಅತಿಸಂಭ್ರಮವ ಪಡುತಲಿ ನನ್ನ । ಮತಿಯೆಂಬುವಾ ಕನ್ಯಕೆಯನ್ನು ॥ ಸತಿಯಾಗಿ ನಿನಗೀಯುವೆನು; । ಹಿತದಿಂದ ಕೈಹಿಡಿಯೊ ದೇವ ಎಂದು ॥ ॥ ೧ ॥ ಆದರದಿಂದ ನಿನ್ನ ಸೇವೆಗೆಂದು । ಐದು ಪ್ರಾಣಗಳ ಸೇವಿಸುವೆನು; ॥ ಮೋದದಿಂದಲಾ ಸೇವಕರಿಂದ । ಆದ ಸೇವೆಯನು ಸ್ವೀಕರಿಸೆಂದು ॥ ೨ ॥ ನಿನಗೆಂದು ನಾನು ವಿಷಯಂಗಳನು । ಅನವರತವು ಭೋಗಿಸುವೆನು; ॥ ಚಿನುಮಯನೆ, ಅದನೆಲ್ಲವನು । ನಿನಗೊಪ್ಪಿಸಿಕೊಳ್ಳೆನ್ನುತ ॥ ೩ ॥ —(ಭಕ್ತಿ. ಗೀ)

ಶಿವನು ಎಚ್ಚರಗೊಳ್ಳದಿರಲು ಮತ್ತೆ ಬೇಡುತ್ತಾಳೆ—

ವೃ॥ ಕರೆವುದದೆಂದು? ಕಾಲ್ವಿಡಿಸಿಕೊಳ್ವುದದೆಂದು? ದಯಾಕಟಾಕ್ಷದಿಂ! ಪೊರೆವುದದೆಂದು? ಮೆಲ್ನುಡಿಗಳಿಂ ಮುದವೇರಿಪುದೆಂದು? ಸೋಂಕಿನಿಂ ॥ ಹರಿಪುದದೆಂದು? ಸಂತಸದೆ ಪೆರ್ಚಿಪುದೆಂದು? ಮನಸ್ವಿ,ನೀಂ ಕರಂ।ಕರಗಿಪುದೆನ್ನ ನೆಂದೊಸೆದು ಪೇಳಿನಗಿಂದೆಲೆ ಹಂಪೆಯಾಳ್ದನೇ ॥ —(ವಿ. ಶ)

ಇನ್ನೂ ಶಿವನು ಕಣ್ಣುಬಿಡದಿರುವುದನ್ನು ನೋಡಿ ಹೇಳಿದ್ದು —

ಶಂಕರಾಭರಣ—ರೂಪಕ

ನೋಡಲಾಗದೆ। ದೇವ । ನೋಡಲಾಗದೆ ॥ ಪ ॥ ಕೂಡೆ ನಿನ್ನ ದಿಟ್ಟಿಮೂರು । ನಾಡೆ ಲೇಸು ಮಾಡಲೆನ್ನ ॥ ಅ . ಪ ॥ ಮಿಸುಕಲೀಯದೆನ್ನ ಮೋಹ। ಎಸರವೆಂಬ ವನವನುರುಹಿ । ಭಸಿತವೆನಿಸಿ ರುದ್ರ, ನಿನ್ನ । ನೊಸಲ ವಹ್ನಿನೇತ್ರದಿಂದೆ ॥ ೧ ॥ ಕಲುಷತಿಮಿರ ಮುಸುಕಿ ಮುಗಿದು । ನಲಿಯದೆನ್ನ ಹೃದಯನಳಿನ॥ ಪಲರೆದಿವ್ಯರೂಪ, ನಿನ್ನ, ಬಲಡ ಭಾನುನಯನದಿಂದೆ ॥ ೨ ॥ ಶರಣಕುಲಚಕೋರತಣಿಯೆ । ಹರುಷಶರಧಿ ಮೊರಲೆನ್ನ ॥ ವರದ ಶಂಭುಲಿಂಗ, ನಿನ್ನ । ವರಸುಧಾಕರಾಕ್ಷಿಯಿಂದೆ ॥ ೩ ॥ —(ದಾ)

ಈಶ್ವರನು ಹೀಗೆ ಸಮಾಧಿನಿಷ್ಠನಾಗಿರುವುದನ್ನು ನೋಡಿ ಅವನ ಮನಸ್ಸನ್ನು ಕದಲಿಸುವದಕ್ಕಾಗಿ ಇಂದ್ರನೇ ಮೊದಲಾದವರು ಕಾಮನನ್ನು ಹುರಿದುಂಬಿಸಿ ಕಳುಹಿಸಿದ್ದರ ಮೇಲೆ ಅವನು ತನ್ನ ಪರಿವಾರಸಮೇತನಾಗಿ ಬಂದು ಮರೆಯಲ್ಲಿ ನಿಂದು ತನ್ನ ಪುಷ್ಪಬಾಣವನ್ನು ಹೂಡಿದಾಗ ಅದು ವ್ಯರ್ಥವಾದದ್ದು—

ಕಂ॥ ಜಲದೊಳಗಣ ಜಲಜದವೊಲ್, । ತಿಲದೊಳಗಣ ತೈಲದಂತೆ, ಕಾಷ್ಠದ ನಡುವು ॥ ಜ್ವಲಿಸುವ ಶಿಖಿಯಂತೊಪ್ಪುವ । ಚಲಶಿವನಂ ಕಾವನೆಸುಗೆ ಕೈಕೊಂಡಪುದೇ ?॥ —( ಗಿ. ಕ)

ಮನ್ಮಥನ ಬಾಣವು ಏನಾಯಿತೆಂದರೆ—

ಭಾ॥ ಕುಸುಮಚಾಪನು ನಿಶಿತಬಾಣದೆ । ಭಸಿತಭೂಷಣನನ್ನು ಹೊಡೆಯಲು । ದೆಸೆಯ ತಪ್ಪುತೆ ವೇಗದಿಂ ಮೊರೆದೈದಿದಾ ಬಾಣ ॥ ಎಸೆದ ಹೊಡೆತವು ಶಿವಗೆ ತಾಕದೆ । ಶಶಿಮುಖಿಯ ಹೃದಯಕ್ಕೆ ಅತಿಶಯ । ಕಸುವಿನಿಂದಲೆ ತಗುಲಿ ಅವಳಿಗೆ ವ್ಯಸನಗೊಳಿಸಿದುದು ॥ —(ಪಾ. ಪ ಕಾ)

ಮನ್ಮಥನ ಈ ಬಗೆಯ ಅತಿಕ್ರಮಪ್ರವೇಶಕ್ಕೆ ನಂದೀಶ್ವರನು ಕೋಪಗೊಂಡು ನೋಡುತ್ತಲೆ—

ವೃ ॥ ಕೀರತುರಂಗ ಓಡಿದವು; ಚೂತಗಜಾವಳಿ ಘೀಳಿಡುತ್ತೆ ಕಾಂ। ತಾರದೊಳ್ಳೈದೆ ಪೊಕ್ಕವು; ಸಪಿಾರನುಡುಂಗಿದನಾ ವಸಂತಕಂ ॥ ಘೋರವನಂ ಗಳೊಳ್ಪುಗುತೆ ಮೃಗರೆದಂ; ಕಲಹಂಸಮಾಲೆ ಕಾ। ಸಾರದೊಳಂಜಿ ಪೊಕ್ಕವು; ರಥಾಂಗರಥಂ ನಡೆಗೆಟ್ಟವದ್ಭುತಂ! ॥ —(೧–ಕ)

ಅಷ್ಟರಲ್ಲಿ—

ಶ್ಲೋ॥ ಅತೀಂದ್ರಿಯಕ್ಷೋಭಮಯುಗ್ಮನೇತ್ರಃ । ಪುನರ್ವಶಿತ್ವಾದ್ಬಲ ವನ್ನಿಗೃಹ್ಯ ॥ ಹೇತುಂ ಸ್ವಚೇತೋವಿಕೃತೇರ್ದಿದೃಕ್ಷು। ರ್ದಿಶಾಮುಪಾಂತೇಷು ಸಸರ್ಜ ದೃಷ್ಟಿಮ್ ॥ —(ಕು. ಸಂ)

ಅ॥ ಮುಕ್ಕಣ್ಣನು ತನ್ನ ಇಂದ್ರಿಯಗಳಿಗಾದ ಕ್ಷೋಭವನ್ನು ವಶಿತ್ವಶಕ್ತಿಯಿಂದ ಬಲವಾಗಿ ಬಿಗಿಹಿಡಿದು ತನ್ನ ಮನಸ್ಸನ್ನು ಕದಲಿಸಿದ ವಸ್ತುವನ್ನು ನೋಡುವದಕ್ಕಾಗಿ ತನ್ನ ನೋಟವನ್ನು ಸುತ್ತಲೂ ಬೀರಿದನು.

ಮರೆಯಲ್ಲಿದ್ದ ಮನ್ಮಥನು ಕಣ್ಣಿಗೆ ಬೀಳುತ್ತಲೇ ಅವನಿಗೆ ಸಿಟ್ಟು ಹೆಚ್ಚಾಗಿ—

ವೃ ॥ ಪೊಗೆದುದು, ಪತ್ತಿದತ್ತು, ಕಿಡಿಯಿಟ್ಟುದು, ನಾಲ್ದೆಸೆದೋರಿದತ್ತು, ಜಾ । ನ್ಗೊಗೆದುದು, ನಿಂದ ಪೊಂಬೆಳಗುಮಂ ಪರಪುತ್ತದು ಧಂಧಗಿಲ್ಧಗಿ ॥ ಲ್ಧಗಿಲೆನುತಟ್ಟಿ ತಟ್ಟಿದುದು, ಮುಟ್ಟಿತು, ತಿಂದು ತೇಗಿದ । ತ್ತಗಿಯದೆ ನಿಂದ ಪೂಗಣೆಯುಮಂ ಪಣೆಗಣ್ಣುರಿ ಹಂಪೆಯಾಳ್ದನಾ ॥ —(೧. ಕ)

ಟಿ॥ ಪರಪುತ್ತ—ಹರಡುತ್ತ. ಅಗಿಯದೆ+ತಿಂದು+ತೇಗಿದತ್ತು.

ಇಷ್ಟರಲ್ಲಿ ಪಾರ್ವತಿಯು ಕಣ್ಣಿಗೆ ಬೀಳಲು ಆಕೆಯ ಮನೋದಾರ್ಢ್ಯವನ್ನು ಪರೀಕ್ಷಿಸ ಬೇಕೆಂದು ಶಿವನು ಅಂತರ್ಧಾನನಾದಾಗ ಪಾರ್ವತಿ ನಿರಾಶಳಾಗದೆ—

ಕಂ॥ ಭಗ್ನಮನಮಲ್ಲದಚಲಿತೆ । ಲಗ್ನವ್ರತೆಯಾಗಿ ಶಂಕರಪ್ರೇಮರ ಸೋ॥ ನ್ಮಗ್ನಾಂಗಿ ಧೈರ್ಯನಿಧಿ ಪಂ। ಚಾಗ್ನಿಯ ನಡುವಗಜೆ ವಿಪುಲತಪದೊ ಳ್ನಿಂದಳ್ ॥ —(೧. ಕ)

ಆಗ ಪಾರ್ವತಿಯು ಹಂಬಲಿಸುತ್ತಿದ್ದದ್ದು—

ಭಾ ॥ ಆರ ನಾಮವನೊಲಿದು ಪಾಡುವೆ?। ನಾರ ಪಾದವ ಪೂಜೆ ಮಾಡು ವೆ?। ನಾರ ಮೂರ್ತಿಯ ನೆನೆವೆ ಮನದೊಳು ನೀನರಿಯದಂತೆ?॥ ಆರು ಗತಿ? ಮತಿ ಯಾರು? ದಿಕ್ಕೆನ। ಗಾರು? ನೀನಲ್ಲದೆ ಸದಾಶಿವ, । ಪೂರಹರ, ಮೈದೋರಿ ರಕ್ಷಿಸು ನಮ್ಮನನವರತ ॥ —(ಶಿ. ಭ. ಸಾ)

ಜುಂಜೋಟಿ—ರೂಪಕ

ಶಂಕರಾ, ನಿನ್ನ ಸೋಂಕಿನ ಬಿಂಕವೆಂದು ದೊರೆವುದೋ? ॥ ಪ ॥ ವಿಧಿಯ ರುಂಡವನ್ನು ನೀನು। ಮುದದಿ ಹಿಡಿದ ಕಾರಣದಿ ॥ ಅದನು ಕನಕಪಾತ್ರೆಯೆಂದು। ಬುಧರು ಸ್ತುತಿಸುವಂತೆ ಎನಗೆ ॥ ೧ ॥ ಮಸಣದ ಬಿಸಿಬೂದಿಯನ್ನು। ವಸನದಂತೆ

ಸೀನು ಧರಿಸೆ ॥ ರಸೆಯೊಳದು ವಿಭೂತಿಯೆನಿಸಿ। ಹೆಸರು ಹೊಂದಿದಂತೆ ಎನಗೆ ॥ ೨ ॥ ಹರಿಯು ಕಣ್ಣು ಕಳಚಿ ನಿನ್ನ। ಚರಣಯುಗದೊಳಿಡಲದನ್ನು ॥ ಸರಸಿಜವಂ ಮಾಡಿದಂಥ। ಪರಮಚಿದ್ವಿಶೇಷನೆ ಎನಗೆ ॥ ೩ ॥ —(ಭಕ್ತಿ . ಗೀ)

ಈ ಭಾವನೆಯಿಂದ ತಪಸ್ಸನ್ನು ಮಾಡುತ್ತಿದ್ದ ಪಾರ್ವತಿಯ ತಪೋವನಕ್ಕೆ ಶಿವನು ಬ್ರಾಹ್ಮಣ ವೇಷದಿಂದ ಬಂದು ಸತ್ಕಾರವನ್ನು ಹೊಂದಿ ಆಕೆಯನ್ನು ಪರೀಕ್ಷಿಸುವದಕ್ಕಾಗಿ ಆಕೆಗೆ ಹೇಳಿದ್ದು—

ಶಂಕರಾಭರಣ—ತ್ರಿಪುಟ

ಯಾಕೆ ನೀ ಒರಿದೆ ಮೆಚ್ಚಿದೆ ಭವಹರಗೆ। ಲೋಕರಕ್ಷಕನೆಂಬ ಗುರುಸಿದ್ಧೇಶ್ವರಗೆ ॥ ಪ ॥ ನೀ ಕಮಲಮುಖಿ ಅಖಿವೈರಿಯನೇಕ ವ್ಯೆಯೊಳು ಸುತ್ತಿಕೊಂಡು ವಿ। ವೇಕವಿಲ್ಲದೆ ವಿಷವನುಂಡ ಪಿನಾಕಧರನಿಗೆ ಸೋಲುವದೆ? ನೀ ॥ ಅ. ಪ ॥ ಶಿರದೊಳು ಶಶಿಯು ಕೆಂಜೆಡೆಯಿಪ್ಪ ಭೋಗಿ। ಸ್ಮರನ ಧರಿಸಿ ಭಸ್ಮ ಹಣೆಗಟ್ಟಯೋಗಿ। ಇರುವರೆ ಸ್ಥಳವಿಲ್ಲದಂತೆ ತಾ ಪೋಗಿ। ಮೆರೆವ ಶ್ಮಶಾನ ಮಂದಿರ ಸುಖವಾಗಿ ॥ ಮರುಳು ಭೂತಪಿಶಾಚಿಯಕ್ಷರ। ನೆರವಿಯುಲಿ ಕುಣಿಕುಣಿದು ಬ್ರಹ್ಮನ। ಶಿರವಿಡಿದು ತಿರಿದುಂಬ ಗೊರವಗೆ ಒರಿದೆ ಒಲಿವುದೆ? ಗರುವೆ ಪಾರ್ವತಿ ॥ ೧ ॥ ಮಂಡೆಯೊಳ್ ಜಾಹ್ನವಿಶಶಿಯನ್ನೆ ಸೂಡಿ। ರುಂಡಮಾಲೆಯ ಕೊರಳೊಳಗಿಟ್ಟು ಆಡಿ। ಕುಂಡಲಗಳ ಧರಿಸಿರುವನ ನೋಡಿ। ಖಂಡಪರಶುವೆಂದು ಅವನ ಕೊಂಡಾಡಿ ॥ ದಿಂಡೆಯಾಗಿಹ ಪ್ರಾಯದವಳು ನೀ। ಕೆಂಡಗಣ್ಣಿನ ಕ್ರೂರ ರೂಪನ। ಕಂಡು ನೀನವ ಗಂಡನೆಂದು ಪ್ರಚಂಡಗೊಲಿದಿಹೆ ಯಾಕೆ ಪಾರ್ವತಿ? ॥ ೨ ॥ ಕರದಿ ತ್ರಿಶೂಲಡಮರುಗಳ ಧರಿಸಿರುವ। ಕರಿಚರ್ಮಾಂಬರ ಹುಲಿದೊಗಲುಟ್ಟು ಮೆರೆವ। ಹಿರಿಯತನಕ್ಕೆ ವೃಷಭನ ಏರಿ ಮೆರೆವಾ। ಸಿರಿಯ ಹೋಗಾಡಿ ಪಕೀರನಂತಿರುವ ॥ ವಿರಚಿಸಿದ ಲೀಲಾವಿನೋದದ। ಪರತರಶ್ರೀಪ್ರಣವರೂಪನ। ಗುರುಪ ವಿಮಲಾನಂದಮೂರುತಿ। ಗರುಡಪುರನಂಜುಂಡಲಿಂಗನ ॥ ೩ ॥ —(ದಾ)

ಈ ಮಾತುಗಳನ್ನು ಕೇಳಲಾರದೆ ಕಿವಿಗಳನ್ನು ಮುಚ್ಚಿಕೊಂಡಿದ್ದ ಪಾರ್ವತಿಯು ಶಿವದೂಷಕನೊಡನೆ ಮಾತಾಡಬಾರದೆಂದು ಆತನಿಗೆ ಕೇಳಿಸುವಂತೆ ಶಿವನಿಗೆ ತನ್ನಲ್ಲಿರುವ ಭಕ್ತ್ಯತಿಶಯವನ್ನು ಪ್ರಕಟಿಸಿದ್ದು—

ವೃ॥ ಉಡುವುದು ಚರ್ಮವಾಗಿರೆಯುಮಿತ್ತಪೆಯುತ್ತಮವಸ್ತ್ರಜಾಲಮಂ; । ಕುಡಿವುದು ಗಂಜಿಯಾದೊಡೆಯುಮಿತ್ತಪೆ ಬಾಯ್ಗಿನಿದಾದ ಬೋನಮಂ; ॥ ನಡೆವೊಡೆ ಎತ್ತೆ ವಾಹನಮಿರಲ್ಕೊಡುವೈ ಗಜವಾಜಿರಾಜಿಯಂ; । ಕೊಡುವದಕುಂಟು ಭೋಗಿಪುದಕಿಲ್ಲ ವಿಚಾರಿಸಲೇಂ ವಿಚಿತ್ರಮೋ! —(ವಿ. ಕಾ)

ಬೇಗಡೆ—ಆದಿತಾಳ

ಬಹುಚಿತ್ರವೀ ನಿನ್ನ ಮಹಿಮೆ। ಚಂದ್ರಶೇಖರಾ, ಮಹಾದೇವಾ ॥ ಪ ॥ ವಿಷವೆ ನಿನ್ನಯ ಅಶನವಾದರೂ। ವಿಷಮನೇತ್ರ, ನೀನಮೃತಸ್ವರೂಪ ॥ ೧ ॥

ತಲೆಯ ಬುರುಡೆಯ ತಳೆವನಾದರೂ। ತಿಳಿದು ನೋಡೆ ನೀನಿಳೆಗೆ ಪಾವನ ॥ ೨ ॥
ವಿಷಮದೃಷ್ಟಿ ನೀನಾಗಿ ಕಂಡರೂ। ಅಸಮಮಹಿಮನೆ, ಸಮದರ್ಶಿ ನೀನು ॥ ೩ ॥
ತಿರಿದು ತಿಂಬುದು ತಪ್ಪದಿದ್ದರೂ। ಅರಿಯೆ ನೀನು ಬ್ರಹ್ಮಾಂಡದೀಶ್ವರನು ॥ ೪ ॥
ಭವನಾಗಿ ನೀನಭವನಾಗಿರುವೆ;। ಭವವ ಕಳೆವ ಚಿತ್ಕಳೆಯು ಆಗಿರುವೆ ॥ ೫ ॥
—(ಭಕ್ತಿ. ಗಿ॰)

ಈ ಬಗೆಯ ಏಕನಿಷ್ಠೆಗೆ ಮೆಚ್ಚಿದ ಶಿವನು ಪ್ರೇಮದಿಂದ ಆಲಿಂಗಿಸುವುದಕ್ಕೆ ಹೋಗುತ್ತಲೆ ಪಾರ್ವತಿಯು ಕೊಸರಿಕೊಂಡಾಗ ಆದ ಸಂಗತಿ—

ಭಾ॥ ಮುಟ್ಟದಿರು; ದೂರದಲಿ ನಿಂದಿರು; । ಕೆಟ್ಟ ಹಾರುವ, ಎನುತ ಕಂಗಳ। ಬಿಟ್ಟು ನೋಡಿದಳಬಲೆ; ಕಂಡಳು ಮುಂದೆ ಹೊಳೆಹೊಳೆವ ॥ ದೃಷ್ಟಿಗಳು ಕೋರವಿಸಲೆಡಬಲ। ದಿಟ್ಟಿಡೆಯ ಕಮಲಜಸುರೇಂದ್ರರ। ಬಿಟ್ಟ ಬೀದಿಯ ಬಹಳ ತೇಜದ ತೆರಳಿಗೆಯ ಶಿವನ ॥ —(ಪಾ. ಪ. ಕಾ)

ಟಿ॥ ಕೋರವಿಸಲು —ಮಂಜುಮಂಜಾಗಲು. ತೆರಳಿಗೆಯ —ಸಾಲುಹಿಡಿದಿರುವ.

ಆಗ ಶಿವನು ತನ್ನ ಮೆಚ್ಚುಗೆಯನ್ನು ತೋರಿಸಿ ಪಾರ್ವತಿಗೆ ಮದುವೆಯಾಗುವೆನೆಂದು ಭರವಸವನ್ನು ಕೊಟ್ಟು ಕೈಲಾಸಕ್ಕೆ ಹೋಗಿ ಕನ್ಯಾರ್ಥಿಯಾಗಿ ಅರುಂಧತೀಸಮೇತರಾದ ಸಪ್ತರ್ಷಿಗಳನ್ನು ಹಿಮವಂತನ ಬಳಿಗೆ ಕಳುಹಿಸುತ್ತಲೆ—

ಚೌ॥ ಅರಳು ತೋರದೆ ಮರಗಳಿಗೆ ಫಲ-ಭರವು ಬಂದಂತೆನ್ನುತ । ಪಿರಿದೆನಿಸಿದುತ್ಸಾಹದಿಂ ಋಷಿ-ವರರ ನೆರೆ ಸತ್ಕರಿಸುತ ॥ ತರಳಬುದ್ಧಿಯವನಿಗೆ ಜ್ಞಾನವ್ರ-ದೊರೆತ ಹರ್ಷವ ಮರೆಸುತ। ಗಿರಿವರನು ಹರ್ಷಿಸಿದನಾಗಲೆ-ಹರನಳಿಯನೆನಗೆನ್ನುತ ॥

ಸಪ್ತರ್ಷಿಗಳು ನಿಶ್ಚಿತಾರ್ಥವನ್ನು ಮಾಡಿಕೊಂಡು ಹೋಗುತ್ತಲೆ ಪರಮೇಶ್ವರನು ವಿವಾಹಸನ್ನದ್ಧನಾಗಿ ಬರುತ್ತಿದ್ದ ಸಡಗರವನ್ನು ಕವಿ ವರ್ಣಿಸಿರುವದೆಂತೆಂದರೆ—

ಶ್ಲೋ॥ ಜಂಭಾರೇ, ಭವ ಪಾರ್ಶ್ವತಃ; ಪರಿಸರೇಣಾಯಾಹಿ ಲಕ್ಷ್ಮೀಪತೇ; । ವೇಧಃ ಸ್ವಸ್ತ್ಯಯನಾನ್ಯಧೀಷ್ವ; ಮುನಯಃ, ಪ್ರಬ್ರೂತ ರೌದ್ರೀಂ ರುಚಮ್; ॥ ಚಂದ್ರಾರ್ಕಾವಪಿ ಚಾಮರೇ ವಿಧುನುತಾಂ, ಛತ್ರೀಭವಾಹೀಶ್ವರ;। ಪ್ರಷ್ಠಾ ರುದ್ರಗಣಾಃ ಪ್ರಯಾತ; ಪವನ, ಸ್ಪಂದಸ್ವ ಮಂದೋದಯಃ ॥
—(ಪಾ. ಪ. ನಾ)

ಅ॥ ಇಂದ್ರನೆ ಪಕ್ಕದಲ್ಲಿರು; ವಿಷ್ಣುವೇ ಅಂಚಿನಲ್ಲಿಯೇ ಬಾ; ಬ್ರಹ್ಮನೆ ವೇದವನ್ನು ಹೇಳು; ಮುನಿಗಳೆ ರುದ್ರಸೂಕ್ತವನ್ನು ಹೇಳಿ; ಸೂರ್ಯಚಂದ್ರರೆ ಚಾಮರಗಳನ್ನು ಬೀಸಿರಿ; ಆದಿಶೇಷನೆ ಕೊಡೆಯಾಗು; ಮುಂದಾಳುಗಳಾದ ರುದ್ರಗಣಗಳೇ, ಮುಂದೆನಡೆಯಿರಿ; ವಾಯುವೇ, ಮೆಲ್ಲಗೆ ಬೀಸು (ಎಂದು ನಂದೀಶ್ವರನು ವ್ಯವಸ್ಥೆಯನ್ನು ಮಾಡುತ್ತಿದ್ದನು)

ಹೀಗೆ ಈಶ್ವರನು ಬರುತ್ತಿದ್ದಾಗ ನಡೆದ ಒಂದು ಚಮತ್ಕಾರವೇನೆಂದರೆ—

ಶ್ಲೋ॥ ವಿಷ್ಣೋಃ ಶ್ವಾಗಮನಂ ನಿಶಮ್ಯ ಸಹಸಾ ಕೃತ್ವಾ ಫಣೀಂದ್ರಂ ಗುಣಃ। ಕೌಪೀನಂ ಪರಿಧಾಯ ಚರ್ಮ ಕರಿಣಃ ಶಂಭೌ ಪುರೋ ಧಾವತಿ ॥ ದೃಷ್ಟ್ವಾ ವಿಷ್ಣುರಥಂ ಸಕಂಪಹೃದಯಃ ಸರ್ಪೋsಪತದ್ಭೂತಲೇ; । ಕೃತ್ತಿರ್ವಿಸ್ಖಲಿತಾ; ಹ್ರಿಯಾ ನತಮುಖೋ ನಗ್ನೋ ಹರಃ ಪಾತು ವಃ ॥ —(ಸು)

ಅ॥ ವಿಷ್ಣು ಬಂದನೆಂದು ಕೇಳಿ ಒಡನೆ ಶಿವನು ಹಾವನ್ನು ಉಡುದಾರವಾಗಿ ಕಟ್ಟಿಕೊಂಡು ಆನೆಯ ಚರ್ಮವನ್ನು ಕೌಪೀನವಾಗಿ ಮಾಡಿಕೊಂಡು ಮುಂದೆಬರುತ್ತಿರಲು ವಿಷ್ಣುವಿನ ವಾಹನವಾದ ಗರುಡನನ್ನು ನೋಡಿ ಗಡಗಡ ನಡುಗುತ್ತ ಹಾವು ನೆಲದ ಮೇಲಕ್ಕೆ ಬಿದ್ದು ಹೋದುದರಿಂದ ಚರ್ಮವು ಉದುರಿ ಹೋಗಲಾಗಿ ಬೆತ್ತಲೆಯಾಗಿ ತಲೆಯನ್ನು ಬಗ್ಗಿಸಿಕೊಂಡ ಶಿವನು ನಮ್ಮನ್ನು ಕಾಪಾಡಲಿ.

ಈಶ್ವರನ ಪರಿವಾರವು ಹೀಗೆ ಬರುತ್ತಿರುವಾಗ ಅತ್ತ ಪರ್ವತರಾಜನ ಪರಿವಾರವೂ ಬರುತ್ತಿದ್ದದ್ದೆಂತೆಂದರೆ—

ಶ್ಲೋ॥ ಭೂಪಂಕೇರುಹಕರ್ಣಿಕಾಯಿತತನುರ್ಮೇರುಸ್ಸುರಾಣಾಂ ಪ್ರಿಯೋ, । ಯೋಕ್ತ್ರೀಭೂತಭುಜಂಗರಾಜಕಷಣಸ್ನಿಗ್ಧೋಪಲೋ ಮಂದರಃ, ॥ ವಿಂಧ್ಯೋ, ವ್ಯೋಮನಿ ಭಾನುಮಾಲಿಪದವೀಜಂಘಾಲಶೃಂಗಾವಲಿಃ । ಸಾಕಂ ಸಂಪ್ರತಿ ಗಂಧಮಾದನಮುಖೈಸ್ತ್ವಾಂ ದ್ರಷ್ಟುಮಭ್ಯಾಗತಾಃ ॥—(ಪಾ.ಪ.ನಾ)

ಅ॥ ದೇವತೆಗಳಿಗೆಲ್ಲ ಪ್ರಿಯನಾಗಿ ಭೂಮಿಯೆಂಬ ಕಮಲದ ಕರ್ಣಿಕೆಯಾದ ಮೇರು ಪರ್ವತವೂ ಕಡೆಯುವ ಹಗ್ಗವಾದ ಆದಿಶೇಷನ ಶಿಕ್ಕಾಟದಿಂದ ನಯವಾದ ಕಲ್ಲುಗಳುಳ್ಳ ಮಂದರಪರ್ವತವೂ ಆಕಾಶದಲ್ಲಿ ಸೂರ್ಯನ ದಾರಿಗೆ ಅಡ್ಡಲಾಗಿರುವ ಶಿಖರಗಳುಳ್ಳ ವಿಂಧ್ಯಪರ್ವತವೂ ಗಂಧಮಾದನ ಮೊದಲಾದವರಿಂದ ಕೂಡಿ ನಿನ್ನನ್ನು ನೋಡುವದಕ್ಕೆ ಬರುತ್ತಿದ್ದಾರೆ (ಎಂದು ದೂತರು ತಿಳಿಸಿದರು).

ಈ ಪ್ರಕಾರ ಎಲ್ಲರೂ ಸೇರಿದ ಮೇಲೆ ವಿವಾಹದ ಯತ್ನವು ನಡದಿದೆ. ಹಸೆಯ ಜಗುಲಿಯ ಮೇಲೆ ಪಾರ್ವತೀಪರಮೇಶ್ವರರನ್ನು ಕೂಡಿಸಿದ್ದಾರೆ. ಗೋತ್ರೋಚ್ಚಾರ ಮಾಡುವ ಪ್ರಸಂಗದಲ್ಲಿ ನಡೆದ ಸಂಗತಿಯೇನೆಂದರೆ—

ಶ್ಲೋ॥ ಕಿಂ ಗೋತ್ರಂ? ಕಿಮು ಜೀವನಂ? ಕಿಮು ಧನಂ? ಕಾ ಜನ್ಮಭೂಃ? ಕಿಂ ವಯಃ? । ಕಿಂ ಚಾರಿತ್ರ್ಯಮಮುಷ್ಯ? ಕೇ ಸಹಚರಾಃ? ಕೇ ವಂಶಜಾಃ ಪ್ರಾಕ್ತನಾಃ? ॥ ಕಾ ಮಾತಾ? ಜನಕಃ ಶಿವಸ್ಯ ಕಃ? ಇತಿ ಪ್ರಹ್ವೇಣ ಪೃಥ್ವೀಭೃತಾ । ಪೃಷ್ಟಾಸ್ಸಸ್ಮಿತಸಮ್ರಮೂಕವದನಾಃ ಸಪ್ತರ್ಷಯಃ ಪಾಂತು ವಃ ॥ —(ಸು)

ಅ॥ ಗೋತ್ರ ಯಾವದು? ಜೀವನೋಪಾಯವೇನು? ಐಶ್ವರ್ಯವೆಷ್ಟಿದೆ? ಹುಟ್ಟಿದ ಸ್ಥಲ ಯಾವದು? ವಯಸ್ಸೆಷ್ಟು? ಇವನ ನಡೆವಳಿಕೆ ಏನು? ಒಡನಾಡಿಗಳು ಯಾರು? ಇವನ ವಂಶದ ಹಿಂದಿನವರು ಯಾರು? ಈ ಶಿವನಿಗೆ ತಾಯಿ ಯಾರು? ತಂದೆ ಯಾರು? ಎಂದು ಹಿಮವಂತನು ಕೈಜೋಡಿಸಿ ಪ್ರಶ್ನೆ ಮಾಡಲು ಹುಸಿನಗೆಯನ್ನು ನಗುತ್ತ ತಲೆಯನ್ನು ತಗ್ಗಿಸಿಕೊಂಡು ಸುಮ್ಮನಿದ್ದ ಸಪ್ತರ್ಷಿಗಳು ನಮ್ಮನ್ನು ಕಾಪಾಡಲಿ.

ಕೊನೆಗೆ ಈಶ್ವರನು ವಿಧಿವತ್ತಾಗಿ ಪಾರ್ವತಿಯು ಪಾಣಿಗ್ರಹಣವನ್ನು ಮಾಡುತ್ತಲಿ—

ಶ್ಲೋ॥ ಪಾಣಿಗ್ರಹೇ ಪುಲಕಿತಂ। ವಪುರೈಶಂ ಭೂತಿಭೂಷಿತಂ ಜಗತಿ ॥ ಅಂಕುರಿತ ಇವ ಮನೋಭೂ। ರ್ಯಸ್ಮಿನ್ಭಸ್ಮಾವಶೇಷೋಽಪಿ ॥ —(ಕು. ಸಂ)

ಅ॥ ಬೂದಿಯನ್ನು ಹಚ್ಚಿಕೊಂಡ ಶಿವನು ಪಾರ್ವತಿಯು ಕೈಯನ್ನು ಹಿಡಿದಾಗ ಆದ ರೋಮಾಂಚವು. ಬೂದಿಯಾಗಿ ಹೋದ ಮನ್ಮಥನು ಮತ್ತೆ ಚಿಗುರಿದಂತೆ ಕಾಣಿಸುತ್ತಿತ್ತು.

ಮತ್ತೇನೆಂದರೆ—

ಶ್ಲೋ॥ ಸಂಧ್ಯಾಸಲಿಲಾಂಜಲಿಮಪಿ । ಕಂಕಣಫಣಿಪೀಯಮಾನಮವಿಜಾನನ್ ॥ ಗೌರೀಮುಖಾರ್ಪಿತಮನಾ। ವಿಜಯಾಹಸಿತಃ ಶಿವೋ ಜಯತಿ ॥ —(ಕು. ಸಂ)

ಅ॥ ಸಂಧ್ಯಾರ್ಘ್ಯವಾಗಿ ಬೊಗಸೆಯಲ್ಲಿರುವ ನೀರನ್ನು ಕಂಕಣದ ಹಾವು ಕುಡಿಯುತ್ತಿರುವದನ್ನೂ ತಿಳಿಯದೆ ಗೌರಿಯ ಮುಖವನ್ನು ನೋಡುತ್ತಿರುವದನ್ನು ನೋಡಿ ವಿಜಯಾ ಎಂಬ ಸಖಿಯು ನಗುವ ಹಾಗಾದಂಥ ಶಿವನು ಸರ್ವೋತ್ಕರ್ಷನಾಗಿದ್ದಾನೆ.

ಇಂಥ ಶಿವನಿಗೆ ಬಾಗಿಲು ಕಟ್ಟುವ ಸಮಾರಂಭವು ನಡೆದಿದೆ—

ಶ್ಲೋ॥ ಕಸ್ತ್ವಂ? ಶೂಲೀ; ಮೃಗಯ ಭಿಷಜಂ; ನೀಲಕಂಠಃ ಪ್ರಿಯೇಽಹಮ್; ॥ ಕೇಕಾಮೇಕಾಂ ಕುರು; ಪಶುಪತಿರ್ನೈವ ದೃಶ್ಯೇ ವಿಷಾಣೇ; ॥ ಸ್ಥಾಣುರ್ಮುಗ್ಧೇ; ನ ವದತಿ ತರುಃ; ಜೀವಿತೇಶಃ ಶಿವಾಯಾಃ; । ಗಚ್ಛಾಟವ್ಯಾಮಿತಿ ಹತವಚಾಃ ಪಾತು ವಶ್ಚಂದ್ರಚೂಡಃ ॥ —(ಸು)

ಅ॥ ನೀನು ಯಾರು? ನಾನು ಶೂಲಿ (ಶೂಲಾಯುಧವುಳ್ಳವನು). (ಹೊಟ್ಟೆನೋವಿನ ರೋಗವುಳ್ಳವನಾದರೆ) ವೈದ್ಯನನ್ನು ಹುಡುಕಿಕೊಂಡು ಹೋಗು. ಪ್ರಿಯೇ, ನಾನು ನೀಲಕಂಠನು (ಕಪ್ಪು ಕುತ್ತಿಗೆಯುವನು). (ನೀನು ನವಿಲಾದರೆ) ಒಂದು ಸಲ ಕೇಕೆಹಾಕು. ನಾನು ಪಶುಪತಿ (ಜೀವರಿಗೆಲ್ಲ ಒಡೆಯನು). (ನೀನು ದನಗಳ ಯಜಮಾನನಾದರೆ) ಕೋಡುಗಳು ಕಾಣುವದಿಲ್ಲವಲ್ಲ! ಮುಗ್ಧೇ, ನಾನು ಸ್ಥಾಣು (ವಿಕಾರವಿಲ್ಲದವನು). (ನೀನು ಅಲ್ಲಾಡದವನಾದರೆ) ಮರವು ಮಾತಾಡುವದಿಲ್ಲ; ನಾನು ಶಿವೆಯ ಗಂಡನು. (ನೀನು ನರಿಯ ಒಡೆಯನಾದರೆ) ಕಾಡಿಗೆ ಹೋಗು —ಎಂದು ಬಾಯಿಕಟ್ಟಿ ಹೋದಂಥ ಶಿವನು ನಮ್ಮನ್ನು ಕಾಪಾಡಲಿ.

ಈ ಪ್ರಕಾರ ಮದುವೆಯಾದ ಪಾರ್ವತಿಯೊಡನೆ ಒಂದು ದಿನ ಶಿವನಿಗೆ ಮಾತು ನಡೆದದ್ದೇನೆಂದರೆ (ಗಂಗೆಯನ್ನು ನೋಡಿ ಅಸೂಯೆಯಿಂದ ಪಾರ್ವತಿ ಕೇಳುವದು)—

ಶ್ಲೋ॥ ಮೌಳೌ ಕಿಸ್ನು, ಮಹೇಶ? ಮಾನಿನಿ, ಜಲಂ; ಕಿಂ ವಕ್ತ್ರಮಂಭೋರುಹಮ್; । ಕಿಂ ನೀಲಾಲಕವೇಣಿಕಾ? ಮಧುಕರೀ; ಕಿಂ ಭ್ರೂಲತಾ? ವೀಚಿಕಾ; ॥ ಕಿಂ ನೇತ್ರೇ? ಶಫರೌ; ಕಿಮು ಸ್ತನಯುಗಂ? ಪ್ರೇಂಖದ್ರಥಾಂಗದ್ವಯಂ; । ಸಾಶಂಕಾಮಿತಿ ವಂಚಯನ್ಗಿರಿಸುತಾಂ ಗಂಗಾಧರಃ ಪಾತು ವಃ ॥ —(ಸು)

ಅ|| ಈಶ್ವರನೆ, ತಲೆಯಲ್ಲೇನು? ಸ್ತ್ರೀಯೋ, ಅದು ನೀರು. ಮುಖವಾಗಿ ಕಾಣುವದೇನು? ಕಮಲ. ಕಪ್ಪಗಿರುವ ಮುಂಗುರುಳುಗಳೇನು? ಭ್ರಮರಗಳ ಹಿಂಡು. ಹುಬ್ಬಿನ ಬಳ್ಳಿಯೇನು? ಅಲೆ. ಕಣ್ಣುಗಳಂತಿರುವದೇನು? ಮೀನುಗಳು. ಎರಡುಸ್ತನಗಳಾಗಿರುವದೇನು? ಆಡುತ್ತಿರುವ ಚಕ್ರವಾಕಪಕ್ಷಿಗಳು- ಎಂದು ತನ್ನ ಮೇಲೆ ಸಂಶಯಗೊಂಡ ಸಾರ್ವತಿಯನ್ನು ಮರುಳುಮಾಡಿದ ಶಿವನು ನಮ್ಮನ್ನು ಕಾಪಾಡಲಿ.

ಈ ರೀತಿಯಲ್ಲಿ ತಾನು ಮನದಲ್ಲಿ ವರಿಸಿದ ಪತಿಯನ್ನೆ ಮದುವೆಯಾಗಿ ಕೃತಾರ್ಥಳಾದ ಪಾರ್ವತಿಯನ್ನು ಋಷಿಪತ್ನಿಯರೆಲ್ಲರೂ ಹೊಗಳಿದ್ದು—

ಶಂಕರಾಭರಣ—ತ್ರಿಪುಟೆ

ನಿನಗೆ ಸಮಾನರುಂಟೆ? ಗಿರಿರಾಜಕನ್ಯೇ || ಪ || ಇರುವುದು ಕೈಲಾಸ; | ಸುರಪತಿ ಸೇವಕ; | ಪರಿಕಿಸೆ ಬ್ರಹ್ಮಾಂಡವೆಲ್ಲ ನಿನ್ನ ಕುಟುಂಬ || ೧ || ಕರದೊಳ ಗಿರುವವು | ವರಸಿದ್ಧಿಗಳೆಲ್ಲ; | ಗಿರಿಶನೆ ನಿನ್ನ ಪ್ರಾಣ | ದರಸನಾಗಿರುವನು || ೨ || ಬಿಸಜಾಕ್ಷಿ ನಿನ್ನಯ | ಅಸಮುಪಹಿಮೆಯಿಂದ | ವಿಷಮನೇತ್ರನು ತಾನು | ವಿಷವ ದಕ್ಕಿಸಿಕೊಂಡ || ೩ || ವಾರಿಜಮುಖಿ, ನಿನ್ನ | ಚಾರುರೂಪವ ಕಂಡು | ಧೀರೆ ಗಂಗಾದೇವಿ | ನೀರಾಗಿ ಹರಿದಳು || ೪ || ಮುನಿಜನರೆಲ್ಲರು | ಅನುದಿನ ಹುಡುಕುತ | ನೆನೆಯುತಿರ್ಪರು ನಿನ್ನ | ಚಿನುಮಯರೂಪವ || ೫ || —(ಭಕ್ತಿ. ಗೀ)

ಇದನ್ನು ಲಕ್ಷ್ಯದಲ್ಲಿಟ್ಟುಕೊಂಡೇ ಭಾಗವತೋತ್ತಮರು ಕೀರ್ತನಾರಂಭದಲ್ಲಿ "ಶಿವಭಕ್ತಿಯನು ಮಾಡು ಮಾಡೆಲೆ ನರನೆ" ಎಂದುಪದೇಶ ಮಾಡಿರುವರು.

# ನಳೋಪಾಖ್ಯಾನ

## ಪೀಠಿಕೆ—ಶುಚಿತ್ವ

ಕಮಾಚು—ಅಟತಾಳ

ಶುಚಿಯಾಗಿರು ಸತತ | ಹೆ ಮಾನವ | ಶುಚಿಯಾಗಿರು ಸತತ || ಪ || ನಿತ್ಯ ನಿಯಮವಾದ ಶುಚಿಯನುಪೇಕ್ಷಿಸೆ | ಮತ್ತೆ ದುರ್ವೃತ್ತಿಯೆ ಮುಂದಪ್ಪುದು || ಸತ್ಯದ ಮಾರ್ಗಕೆ ತಪ್ಪದೆ ಇದ್ದರೆ | ಸ್ತುತ್ಯನಾಗುವೆ ನೀ ಶು | ಚಿತ್ವದ ಬಲದಿಂದ || ೧ ||

ಈಗಿನ ಕಾಲದಲ್ಲಿ ಜನರಿಗೆ ಎಷ್ಟು ಧರ್ಮೋಪದೇಶವನ್ನು ಮಾಡಿದರೂ ಹಿಡಿಯದಿರುವದನ್ನು ನೋಡಿ ಸತ್ಪುರುಷರು ಈ ಕಾಲಪ್ರಭಾವವನ್ನು ಕುರಿತು ಆಡಿಕೊಳ್ಳುತ್ತಿರುವದೇನೆಂದರೆ—

ಶ್ಲೋ॥ ನ ದೇವೇ ದೇವತ್ವಂ; ಕಪಟಪಟವಸ್ತಾಪಸಜನಾ; । ಜನೋ ಮಿಥ್ಯಾವಾದೀ ; ವಿರಲತರವೃಷ್ಟಿರ್ಜಲಧರಃ ; ॥ ಪ್ರಸಂಗೋ ನೀಚಾನಾಮವನಿ ಪತಯೋ ದುಷ್ಟಮನಸೋ ;। ಜನಾ ಭ್ರಷ್ಟಾ, ನಷ್ಟಾ; ಅಹಹ! ಕಲಿಕಾಲಃ ಪ್ರಭವತಿ ॥ —(ಸು)

ಅ॥ ಈ ಕಲಿಕಾಲದಲ್ಲಿ ದೇವರಲ್ಲಿ ದೇವತ್ವವಿಲ್ಲ ; ತಪಸ್ವಿಗಳೆಲ್ಲ ಬರೀ ನಟನೆಯವರು ; ಜನರು ಸುಳ್ಳು ಹೇಳುವವರು ; ಮೋಡಗಳು ಸುರಿಸುವ ಮಳೆ ಕಡಿಮೆ ; ನೀಚರಿಗೆ ಏಳಿಗೆ ; ರಾಜರೆಲ್ಲ ಕೆಟ್ಟಮನಸ್ಸಿನವರು; ಜನರೆಲ್ಲರೂ ದುರಾಚಾರಿಗಳಾಗಿ ಕೆಟ್ಟು ಹೋಗಿದ್ದಾರೆ; ಅಹಹ!

ಇದೇ ಅಭಿಪ್ರಾಯವನ್ನೆ ಮೊನ್ನೆಮೊನ್ನಿನ ಒಬ್ಬ ಸಾಧುಗಳು ಹೇಳಿರುವದೇನೆಂದರೆ—

—ಝುಂಪೆ—

ಎಡೆಬಿಡದೆ ಸುಳ್ಳ ಹೇಳುವರು ; ಸಜ್ಜನರಸವ-ಘಡಿಸುತ್ತೆ ಹಳಿಯುತಿಹರು ;। ಹಡೆದ ತಾಯಿಯಬಾಯ ಬಡಿದು ಬಹುವಂಚನೆಯ-ಬಿಡದೆ ಮಾಡುತ್ತಲಿಹರು ; ॥ ನಡೆಸದಿರ್ಪರು ಶಾಸ್ತ್ರಶೋಧನೆಯನುಪಕೃತಿಯ-ಗೊಡವೆಗೇ ಹೋಗದಿಹರು;। ಕೊಡರು ಬೇಡಿದರಿಗಪರಿದೊರ್ಡೇಂ? ಹೋದೊಡೇಂ? ಮೃಡ, ಕಂಚಿಯೇಕಾಂಬರ ॥ ೧ ॥ ವಾದಕ್ಕೆ ಜಗಳಕ್ಕೆ ಹೋಗಿಬರುತಿರುವರೊ-ಪ್ಸಾದ ಮಾತಾಡುತಿಹರು;। ಹಾದಿ ತಪ್ಪಿದ ಕೃತಿಗೆ ನೆರವಾಗುವರು ಕರ್ಮ-ಬಾಧೆಗೊಳಗಾಗಿ ನರರು ; ॥ ಸಾಧಿಸುತ ಪಡೆದೇನನಾದೊಡಂ ದಿನದಿನವು-ಮಾದರದೆ ಪೆಣ್ಗೀವರಿಂ। ತಾದ ಮರವೆಯೊಳು ಹೊರಳುವರೇಕೆ ಹುಟ್ಟಿದರೊ? ಮೇದಿನಿಯೊಳೇಕಾಂಬರ ॥ —(ಹ. ಹಂ)

ಕಲಿಯುಗದ ಮಹಿಮೆಯನ್ನು ದಾಸರು ಹಾಡಿರುವದೇನೆಂದರೆ—

ಕಾಂಬೋದಿ—ಝುಂಪೆ

ಕಲಿಯುಗದ ಮಹಿಮೆಯು ಕಾಣಬಂತೀಗ । ಜಲಜಾಕ್ಷ ಮೇಲ್ಗಿರಿಯ ಶ್ರೀವೆಂಕಟೇಶ ॥ ಪ ॥ ಹರಿಕಥೆಯನೇ ಬಿಟ್ಟು ಹೀನನುಡಿ ಕೇಳುವರು; । ಗುರುಹಿರಿಯರುಗಳ ದೂಷಿಸಿ ಬಾಳ್ವರು ; ॥ ಪೊರೆದ ತಾಯ್ತಂದೆಗಳ ಮಾತುಗಳ ಮನ್ನಿಸದೆ। ತರುಣಿಯರ ಆಜ್ಞೆ ಪಾಲಿಸಿ ಸುಖಿಪರು ॥ ೧ ॥ ಪಟ್ಟದರಸಿಯ ಬಿಟ್ಟು ಪರಸತಿಯ ಬಯಸುವರು; । ಕೊಟ್ಟಸಾಲವ ನುಂಗಿ ಕೊಳಲೆಣಿಪರು ; ॥ ಮುಟ್ಟಿ ಭಾಷೆಯ ಕೊಟ್ಟು ಮೋಸವನೆ ಮಾಡುವರು; । ಬಿಟ್ಟು ಪರದೈವವನು ಮಾರಿಗೆರಗುವರು ॥ ೨ ॥ ಕಂಡುದನು ಹೇಳರು ; ಕಾಣದನೆ ಪೇಳುವರು ; । ಉಂಡ ಮನೆಗೆರಡನ್ನು ಬಗೆಯುತಿಹರು; ॥ ಕೊಂಡಾಡಿ ಬೇಡಿದರೆ ಕೊಡರೊಂದು ರುವ್ವಿಯನು ;। ದಂಡಿಸಿ ಕೇಳುವರಿಗೆ ಧನವ ಕೊಡುತಿಹರು ॥ ೩ ॥ ಕಳ್ಳರೊಳು ಅತಿಸ್ನೇಹ ; ಸುಳ್ಳರೊಳು ಸೋಲುವರು ;। ಒಳ್ಳೆಯವರೊಡನೆ ವಂಚನೆ ಮಾಳ್ಪರು ; ॥ ಇಲ್ಲದ ಅನಾಥರಿಗೆ ಇಷ್ಟೊಂದನಿಕ್ಕರು ; । ಬಲ್ಲಿದವರಿಗೆ ಬಾಯ ಸವಿಯನುಣಿಸುವರು ॥ ೪ ॥ ಮಾಡಿದುಪಕಾರವನು ಮರೆತುಕೊಂಬರು ; ಮತ್ತೆ ।

ಕೂಡಲೇ ಕಾದುವರು ಕಪಟದಿಂದ ; || ರೂಢಿಯೊಳಗೆ ನಮ್ಮ ಪುರಂದರ ವಿಠಲನ್ನ | ಪಾಡಿ ಪೊಗಳದೆ ನಾಡ ವಾರ್ತೆಯಾಡುವರು || ೫ || —(ದಾ)

ಮನುಷ್ಯನಾಗಿ ಹುಟ್ಟಿ ಇಂಥ ದುಃಸ್ಥಿತಿಗೆ ಇಳಿಯಬಾರದೆಂದು ಎಚ್ಚತ್ತ ಒಬ್ಬ ಮಹಾತ್ಮನು ತನಗೆ ತಾನೇ ಹೇಳಿಕೊಂಡಿರುವದೇನೆಂದರೆ—

ಕಂ|| ಕಡೆಯಿಲ್ಲದ ಸಂಸಾರದ | ಕಡೆಗಾಣಲ್ಬಗೆವೆಯಪ್ಪೊಡೆನ್ನುಕ್ತಿಗೊಡಂ||
ಬಡು; ಜೀವ, ನಿನ್ನ ಕಾಲಂ | ಪಿಡಿವೆಂ ; ಧರ್ಮಮನೆ ಮಗುಳೆ ಬಲ್ಪಿಡಿಪಿಡಿಯಾ ||
—(ಅ. ನಾ. ಪು)

ಆ ಧರ್ಮವು ನಮಗೆ ಮೈಗೂಡಬೇಕಾದರೆ ನಮ್ಮಲ್ಲಿ ಶುಚಿತ್ವವಿರಬೇಕು. ಮೈ ತೊಳೆಯುವದು ಹೊರಗಣ ಶುಚಿತ್ವ. ಮನಸ್ಸು ಶುದ್ಧವಾಗುವದು ಒಳಗಣ ಶುಚಿತ್ವ. ಹೊರಗಣ ಶುಚಿತ್ವವು ಒಳಗಣ ಶುಚಿತ್ವಕ್ಕೆ ಕಾರಣವಾಗುವದು. ಹೊರಗಣ ಶುಚಿತ್ವದಿಂದಾಗುವ ಲಾಭವೇದೆಂದರೆ—

ಸೂ|| ಶೌಚಾತ್ಸ್ವಾಂಗಜುಗುಪ್ಸಾ ಪರೈರಸಂಸರ್ಗಃ || —(ಯೋ. ಸೂ)

ಅ|| ಹೊರಗಣ ಶುಚಿಯಿಂದ ತನ್ನ ಶರೀರದ ಮೇಲೆ ಜುಗುಸ್ಸೆಯುಂಟಾಗುವುದು ಮತ್ತು ಮತ್ತೊಬ್ಬರೊಡನೆ ಬೆರೆಯುವ ಇಚ್ಛೆ ತಪ್ಪುವುದು.

ಇದರಿಂದ ವೈರಾಗ್ಯವುಂಟಾಗುತ್ತಿರಲಾಗಿ ಒಳಗಣ ಶುಚಿತ್ವದಿಂದಾಗುವ ಲಾಭವೇನೆಂದರೆ—

ಸೂ|| ಸತ್ತ್ವಶುದ್ಧಿಸೌಮನಸ್ಯೈಕಾಗ್ರ್ಯೇಂದ್ರಿಯಜಯಾತ್ಮದರ್ಶನಯೋಗ್ಯತ್ವಾನಿ ಚ || —(ಯೋ. ಸೂ)

ಅ|| ಮನಸ್ಸಿನ ಶುದ್ಧಿ, ಸೌಮನಸ್ಯ, ಏಕಾಗ್ರತೆ, ಇಂದ್ರಿಯಜಯ, ಆತ್ಮದರ್ಶನದ ಯೋಗ್ಯತೆ—ಇವೆಲ್ಲ ಬರುವವು.

ಈ ಶುಚಿತ್ವದ ಪ್ರಭಾವವನ್ನು ಕವಿ ಚಮತ್ಕಾರವಾಗಿ ವರ್ಣಿಸಿರುವದೇನೆಂದರೆ—

ಶ್ಲೋ|| ಯೋ ವರ್ತತೇ ಶುಚಿತ್ವೇನ ಸ ವೈಶ್ವಾನರ ಉಚ್ಯತೇ | ಯೋ ವರ್ತತೇಽಶುಚಿತ್ವೇನ ಸ ವೈ ಶ್ವಾ ನರ ಉಚ್ಯತೇ || —(ಸು. ಲಾ)

ಅ|| ಯಾವನು ಶುಚಿಯಾಗಿರುತ್ತಾನೊ ಅವನು ವೈಶ್ವಾನರನೆನಿಸುವನು ಎಂದರೆ ಅಗ್ನಿಯು ; ಯಾವನು ಅಶುಚಿಯಾಗಿರುವನೊ ಆ ಮನುಷ್ಯನು ನಾಯಿ ಎನಿಸುವನು.

ಆದ್ದರಿಂದಲೆ ಈ ಶುಚಿತ್ವವಿಲ್ಲದ ಕಡೆ ಮಾತ್ರ ಕಲಿ ಕಾಲುಹಾಕುವನು. ಈ ವಿಷಯದಲ್ಲಿ ಒಬ್ಬ ಕವಿ ಹೇಳಿರುವದೇನೆಂದರೆ—

ಶ್ಲೋ || ಕಲಿಮಲಿನಮತೇರ್ನರಸ್ಯ ನೈವ | ಸ್ವಪದಪ್ರಾಪ್ತಿಪರೋಽಪರೋಽಸ್ತ್ಯುಪಾಯಃ || ಹರಿಗುಣಪರಿಶೀಲನಾತ್ತದೇತ | ನ್ನಿಷಧೇಂದ್ರೋ ನಿಪುಣಂ ವಿಚಾರಣೀಯಃ —(ಸು. ಲಾ)

ಅ|| (೧) ಕಲಿಯಿಂದ ಬುದ್ಧಿಗೆಟ್ಟ (ನರಸ್ಯ) ಮನುಷ್ಯನ ತನ್ನ ಸ್ಥಿತಿಯ ಪ್ರಾಪ್ತಿಗೆ (ಹರಿ) ಪರಮಾತ್ಮನ ಗುಣದ ಪರಿಶೀಲನೆಯ ಹೊರತು ಬೇರೆ ಉಪಾಯವಿಲ್ಲ. (೨) ಕಲಿಯಿಂದ ಬುದ್ಧಿಗೆಟ್ಟ (ನರಸ್ಯ) ನಳನ ಪೂರ್ವಸ್ಥಿತಿಯ ಪ್ರಾಪ್ತಿಗೆ (ಹರಿ) ಕುದುರೆಯ ಗುಣದ ಪರಿಶೀಲನೆಯ ಹೊರತು

ಬೇರೆ ಉಪಾಯವಿಲ್ಲ. ಈ ವಿಷಯದಲ್ಲಿ ನಳಚರಿತ್ರೆಯನ್ನು ಚೆನ್ನಾಗಿ ವಿಚಾರಕ್ಕೆ ತೆಗೆದುಕೊಳ್ಳಬೇಕು.

ಆದ್ದರಿಂದಲೆ ಕೀರ್ತನಾರಂಭದಲ್ಲಿ ಭಾಗವತೋತ್ತಮರು 'ಶುಚಿಯಾಗಿರು ಸತತ' ಎಂದು ಮೊದಲಾಗಿ ಉಪದೇಶ ಮಾಡಿರುವರು. ಇದಕ್ಕೆ ಉದಾಹರಣೆಯಾಗಿ ನಳೋಪಾಖ್ಯಾನವು ನಿರೂಪಣ ಮಾಡಲಾಗುವದು.

---

## ಆಖ್ಯಾನ

ಕೀ॥ ನಿಷಧದೇಶದೊಳಗಕ್ಷಕ್ರೀಡಾ। ವ್ಯಸನದ ಹೊರತತಿಗುಣಶಾಲಿ ॥ ಎಸೆದನು ನಳನತಿರೂಪೌದಾರ್ಯದಿ। ವಿಶದವಾದ ಬಹುಕೀರ್ತಿಯಲಿ ॥

ಇದೇ ಸಮಯದಲ್ಲಿ—

ಸಾ॥ ದಮಋಷಿಯೊರೆಯಲು ಪುತ್ರೇಷ್ಟಿಯ ಸು। ಕ್ರಮದಿ ವಿದರ್ಭಾಧಿಪತಿ ॥ ಸನೆದು ಪಡೆದನಾ ದಮಯಂತಿಯ ಸ। ದಮನು! ಪೊಗಳೆ ಜನವಿತತಿ ॥

ಆ ದಮಯಂತಿಯ ಬಾಲ್ಯವನ್ನು ಕವಿ ವರ್ಣಿಸಿರುವದೇನೆಂದರೆ—

ಭಾ॥ ನಿರಿಗುರುಳ, ಸಿರಿಮುಡಿಯ, ಪವಳಾ। ಧರದ, ತೋಳ್ಗಳ, ಕಂಬು ಕಂಠದ, । ತರಳನಯನದ, ಸಂಪಿಗೆಯ ನಾಸಿಕದ, ಪೆರೆನೊಸಲ, ॥ ಹರಿಯ ಮಧ್ಯದ, ಹಂಸಗಮನದ,। ಗುರುಕುಚದ, ಕರಪಲ್ಲವದ, ಸರ। ಸಿರುಹಮುಖಿ ನಲಿದಾಡುತಿರ್ದಳು ರಾಜಭವನದಲಿ ॥ —(ನ. ಚ)

ಹೀಗಿರುವಾಗ ದೇಶವಿದೇಶಗಳ ವಿಶೇಷಗಳನ್ನರಿತು ಬಂದವರು ನಳನ ಆಸ್ಥಾನದಲ್ಲಿ ಹೇಳಿದ್ದೇನೆಂದರೆ—

ಚೌ॥ ಮುರಹರನ ಸೊಸೆ ನಾಚೆ ಚಂದ್ರನ-ತರಳೆ ತಲೆಯನು ಬಗ್ಗಿಸೆ। ಮೆರೆವ ಪ್ಯೆನಾಕನ ಸಹೋದರಿ-ಕಿರುಮೊಗವನಾಂತೀಕ್ಷಿಸೆ ॥ ಶರಧಿತನುಜೆಯ ಸೌಂದರಿಯವನು-ಮರೆಸಿತೆನೆ ತಾ ರಂಜಿಸೆ । ತರಳೆ ದಮಯಂತಿಯ ಸೊಬಗು ಬಲು-ಮೆರೆವುತಿರ್ದಪುದೀಕ್ಷಿಸೆ ॥

ದಮಯಂತಿಯ ಲೋಕೋತ್ತರಸೌಂದರ್ಯವನ್ನು ಕೇಳಿ ನಳನು ಆಕೆಯಲ್ಲಿ ಅನುರಕ್ತನಾಗಿರುವಾಗ ಅತ್ತ ದಮಯಂತಿಯ ಮುಂದೆ ಹೊಸ ಸಮಾಚಾರದವರು ನಳನ ವಿಷಯವನ್ನು ತೆಗೆದು ಹೇಳಿದ್ದೇನೆಂದರೆ—

ಕಂ॥ ವನನಿಧಿಯಂತೆ ಗಭೀರಂ,। ವನಜಾಕ್ಷನವೊಲ್ಸಮಸ್ತವಿಭವಾಶ್ರಯನುಂ, ॥ ಘನಗಿರಿವೊಲ್ನಿಷ್ಕಂಪಂ,। ಮನಸಿಜನೋಲ್ಚೆಲುವನುಂ, ಬಲಿಯವೊಲುದಾರಂ ॥ —(ನ. ಚಂ)

ವೃ॥ ಶಿವನೆನ್ನಂ ನುಂನ್ನ ಕಣ್ಗಿಚ್ಚಿನೊಳುರುಹಿದನಾ ಮೇಲೆ ಶರ್ವಾಣಿ ಪ್ರೇಮಂ। ತವೆಗೊಂಡೀಯಲ್ಕೆ ಜೀವಂ ಜನಿಸಿದೆನದೆ ಕೃಷ್ಣಂಗೆ ಪ್ರದ್ಯುಮ್ನನಾಗಿ ॥ ನವರೂಪಂ ಬೆತ್ತನಾದರ್ಶನುವಳಿದುದರಿಂದಿನ್ನು ನಾಂ ಮೂರ್ಮೆಯುಂ ಪು। ಟ್ಟುವೆ ನೆಂದೇನಾನುಮಾಗಳ್ನಳನರಪತಿಯಾಗಿರ್ಪನೀ ಚೆಲ್ವನಾಂತು ॥

—(ನ. ಚಂ.)

ಇದರ ಪರಿಣಾಮವೇನಾಯಿತೆಂದರೆ—

—ಝಂಪೆ—

ಕರಗಿತಂತಃಕರಣವು ; । ತನುವಿನೊಳು । ನೆರೆಯಾಯ್ತು ಮದನಾಸ್ತ್ರವು;॥ ವಿರಹಾಗ್ನಿ ಸುಡುತಂಗವಿಭ್ರಮವ ಕೆಡಿಸಿದುದು । ತರಳಾಕ್ಷಿಗಾಕ್ಷಣದೊಳು ॥ ೧ ॥

—(ನ. ಜೋ. ಹಾ)

ಆಗ ದಮಯಂತಿಯು ಹಂಬಲಿಸಿದ್ದು—

ಸಾವೇರಿ—ಛಾಪು

ಎಂದು ನಳನನು । ಕಂಡೇನು ನಾನು ॥ ಪ ॥ ಎಂದಿಗಿನ್ನು ನಾನು । ಧನ್ಯಳಾದೇನು ? ॥ ಅ. ಪ ॥ ಅನ್ನವನ್ನು ತಿನುತ-ಲಿನ್ನು ಬದುಕಲೇನು ?। ಎನ್ನ ಜನ್ಮದಿಂದ-ಸಾರ್ಥಕವೇನು ? ॥ ನನ್ನುತಾಂಗನಾದ-ನಳಚಕ್ರವರ್ತಿ । ಯನ್ನು ಕಾಣದೀಗ-ಬನ್ನಬಡುವೆನಯ್ಯೊ ? ॥ ೧ ॥ ದಾಸಿಯರು ನನ್ನ-ಸೇವೆ ಮಾಡಲೇನು? । ದೇಶವೆಲ್ಲ ನನ್ನ-ಹೊಗಳಿದೊಡೇನು? ॥ ಭಾಸುರಾಂಗನಾದ-ನಳರಾಜಗೆ । ದಾಸಿಯಾಗಿ ನಾನು ಸೇರಲಿಲ್ಲವಯ್ಯೊ? ॥ ೨ ॥ ಮಾತನಾಡಲೊಲ್ಲೆ-ಮೇಲೆ ಮೇಲೆ ನಾನು ; । ಪ್ರೀತಿಗೊಳ್ಳಲೊಲ್ಲೆ-ಬೇರೆ ಸೌಖ್ಯದಿಂದ ; ॥ ಪ್ರೀತಿಪಾತ್ರನಾದ-ನಳರಾಜನೆನ್ನ । ನಾಥನಾಗುತೆನ್ನ ಪೊರೆವನೆಂದೊ ಕಾಣೆ ॥ ೩ ॥

ಮಗಳ ಸ್ಥಿತಿಯನ್ನು ನೋಡಿ ಭೀಮನೃಪಾಲನು ಸ್ವಯಂವರವನ್ನೇರ್ಪಡಿಸಿದನು. ಅನೇಕ ರಾಜರು ಬಂದಿಳಿದರು. ದಮಯಂತಿಯ ಸೌಂದರ್ಯದ ಸುದ್ದಿಯನ್ನು ಕೇಳಿ ಅವಳನ್ನು ತಾವು ವರಿಸಬೇಕೆಂದು ಇಂದ್ರಾಗ್ನಿಯಮವರುಣರೂ ಒಂದು ಕಡೆಯಿಂದ ಬರುತ್ತಿದ್ದಾರೆ. ನಳಚಕ್ರವರ್ತಿಯೂ ಒಂದು ಕಡೆಯಿಂದ ಬರುತ್ತಿದ್ದಾನೆ. ಆಗ ಇಂದ್ರಾಗ್ನಿಯಮವರುಣರು—

ದಿಂ ॥ ನಳನ ರೂಪಂ ಕಂಡಿಸನಿಗೊಲಿವಳೆಂದು । ತಿಳಿದು ತಾವಪನಿಂದವಳ ಪಡೆಯಲೆಂದು ॥ ಕಳುಹೆ ದೂತಂ ತಾನಾಗುತವರಿಗಂದು । ಬಲುಭುಜಂ ಬಂದಂ ಸತಿಯನೊಲಿಪೆನೆಂದು ॥

ಮುಂದೇನಾಯಿತೆಂದರೆ—

ಕಂ॥ ಸುರರಿತ್ತ ಶಕ್ತಿಯಿಂ । ದಿರದೆ ತಾನೊಳಹೊಕ್ಕು । ತರುಣಿಯನು ನೋಡುತ್ತೆ ಬೆರಗುವಟ್ಟು ॥ ಮೆರೆವ ಕಾಮವಿಕಾರ । ದುರುಬೆಯಂ ತಡೆದುಕೊಂ । ಡೊರೆದನಾಕೆಗೆ ತನ್ನ ಬಂದ ಹದನ ॥

ಅದರ ಪರಿಣಾಮವೇನಾಯಿತೆಂದರೆ–

ಶ॥ ನೀನೆ ವರಿಪುದೆನೆ । ತಾನಾಸುರರಿಗ । ಧೀನನೆನಗದೊಪ್ಪದೆನುತ್ತ ॥ ಮಾನಿ ನಳನೆನಲು । ಮಾನಿನಿ ಸಭೆಯೊಳು । ತಾನೆ ನಿನ್ನ ವರಿಸುವೆನೆಂದಳ್ ॥

ಈ ಸುದ್ದಿಯನ್ನು ನಳನು ದೇವತೆಗಳಿಗೆ ತಿಳುಹುತ್ತಲೆ ಅವರು ಮುಂದಾಲೋಚನೆಯನ್ನು ಮಾಡಿಕೊಂಡು ಮುಂದೆಸಾಗಿದರು. ನಳನೂ ಅವರ ಹಿಂದೆ ಸಾಗಿದನು. ಎಲ್ಲರೂ ಸ್ವಯಂವರ ಮಂಟಪದಲ್ಲಿ ಸೇರಿದ್ದಾರೆ. ದಮಯಂತಿಯು ಹೂಮಾಲೆಯನ್ನು ಹಿಡಿದು ಮುಂದೆ ಸಾಗುತಿದ್ದಾಳೆ. ಆಗ—

ಭಾ॥ ಎನ್ನನೊಲಿದಿಹಳೆಂದು ಕೆಲಬರು ; । ನನ್ನೆ ಮಾಡಿದಳೆಂದು ಕೆಲಬರು; । ಗನ್ನದಿಂದೀಕ್ಷಿಸುತಲಿರ್ದರು ಕೆಲರು; ಹುಬ್ಬಿನಲಿ ॥ ಎನ್ನ ನೋಡಿದಳೆಂದು ಕೆಲಬರು ; । ಬಿನ್ನಣದಿ ಎಂಗೆ ಓರೆನೋಟದಿ । ಕಣ್ಣಿನಿಂದೀಕ್ಷಿಸಿದಳೆಂದಾಡಿದರು ಕೆಲಕೆಲರು ॥ —(ನ. ಚ)

ಇನ್ನೂ ಮುಂದೆ ಬಂದು ನೋಡಿದಾಗ—

ಭೋ॥ ನಳನ ಜೊತೆಗೆ ನಾಲ್ವರಮರ । ರುಳಿದು ತಮ್ಮ ರೂಪವನ್ನು । ನಳನ ತೆರದೊಳಾಗಿ ಮುದನಬಾಣದಂದದಿ ॥ ನಳಿನಮುಖಿಗೆ ತೋರೆ ನಿಜಪ। ತಿಳಿಯಲಾರದಾಕೆ ಸುಯ್ದು । ಬಳಲಿ ದೇವವರನಿಗಾಕೆ ಶರಣುಹೊಕ್ಕಳು ॥

ದಮಯಂತಿಯು ಇಂದ್ರನನ್ನು ಪ್ರಾರ್ಥಿಸಿದ್ದು–

ಅಠಾಣ—ರೂಪಕ

ದೇವರಾಜನೆ, ತೋರು ನಳನ । ಭಾವದಿ ನಾ ಭಜಿಸುವವನ ॥ ಪ ॥ ಈ ವಿವಾಹಸಮಯದಲ್ಲಿ । ಈ ವಿಧವನು ಮಾಡುವರೆ? । ಕಾವುದೆನ್ನನೀಗ ನೀನು ॥ ಅ. ಪ ॥ ನಳನ ಹೊರತು ಬೇರೊಬ್ಬರ । ಬಳಸದಿದ್ದರೆ ಮನಸಿನಲ್ಲಿ ॥ ತಿಳಿಯಲೆನಗೆ ನಿಜವಾದಾ । ನಳಮಹಾರಾಜನೀಗ ॥ ೧ ॥ ಪರಮಪತಿವ್ರತೆಯೆಂಬುವ । ಬಿರುದಿಗೆ ನಾ ಪಾತ್ರಳಾದರೆ ॥ ಧರಣೀಶ್ವರ ನಳರಾಜನು । ಪರಮಾನಂದನೀಯಲಿ ॥ ೨ ॥ ನಿಮ್ಮ ನಾನು ಪೂಜಿಸಿದ್ದರೆ । ಧರ್ಮವನ್ನು ಗೈದಿದ್ದರೆ ॥ ನಿರ್ಮಲನಹ ನಳನೃಪತಿಯು । ಪ್ರೇಮದಿಂದ ಕಂಗೊಳಿಸಲಿ ॥ ೩ ॥

ಆಗ ಆಕೆಯ ಭಾವಕ್ಕೆ ಇಂದ್ರಾದಿಗಳು ಮೆಚ್ಚುತ್ತಲೆ–

ಶ್ಲೋ॥ ಸಾಪಶ್ಯದ್ವಿಬುಧಾನ್ಸರ್ವಾನಸ್ವೇದಾನ್ಸ್ತಬ್ಧಲೋಚನಾನ್ । ಅಮ್ಲಾನಸ್ರಗ್ರಜೋಹೀನಾನ್ಸ್ಥಿತಾನಸ್ಪೃಶತಃ ಕ್ಷಿತಿಮ್ ॥ —(ಸಂ. ಭಾರ)

ಅ॥ ಬೆವರಿಲ್ಲದೆ, ಎವೆಯಿಕ್ಕದೆ, ಹೂವಿನ ಸರ ಬಾಡದೆ, ಧೂಲಿಲ್ಲದೆ, ನೆಲಕ್ಕೆ ಮುಟ್ಟದೆ ಇರುವ ದೇವತೆಗಳನ್ನೆಲ್ಲ ಅವಳು ನೋಡಿದಳು.

ಮತ್ತು—

ಶ್ಲೋ॥ ಛಾಯಾದ್ವಿತೀಯೋ ಮ್ಲಾನಸ್ರಗ್ರಜಃಸ್ವೇದಸಮನ್ವಿತಃ । ಭೂಮಿಷ್ಠೋ ನೈಷಧಶ್ಚೈವ ನಿಮಿಷೇಣ ಚ ಸೂಚಿತಃ ॥ —(ಸಂ. ಭಾರ)

ಅ|| ತನಗೆರಡನೆಯದ್ದಾದ ನೆರಳಿಲ್ಲದವನಾಗಿ ಬಾಡಿದ ಮಾಲೆಯುಳ್ಳವನಾಗಿ ಧೂಲಿಯಿಂದಲೂ ಬೆವರಿನಿಂದಲೂ ಕೂಡಿದವನಾಗಿ ನೆಲದ ಮೇಲಿದ್ದು ಎವೆಯಿಕ್ಕುತ್ತಿರುವ ನಳನನ್ನೂ ನೋಡಿದಳು.

ಆಮೇಲೆ ದಮಯಂತಿಯು ಸಭಾಮಧ್ಯದಲ್ಲಿ ನಳನಿಗೇ ಹೂಮಾಲೆಯನ್ನು ಹಾಕಿದಳು. ನಳನು ತಮಗೆ ನಿರ್ವಂಚನೆಯಿಂದ ದೂತಕೃತ್ಯವನ್ನು ಮಾಡಿದ್ದಕ್ಕಾಗಿ ದೇವತೆಗಳು ನಳನಿಗೆ ತೋರಿಸಿದ ಉಪಕಾರವೇನೆಂದರೆ —

ಸೀ|| ಕರೆಯೆ ಯಜ್ಞಕೆ ಬಂದು ದರ್ಶನವನಿತ್ತು ಮೇ-ಣ್ವರಗತಿಯನೀವೆ ನೆಂದಿಂದ್ರನೆಂದ ; । ಕರೆದ ಕಡೆಯಲ್ಲಿ ಕಾಣಿಸಿಕೊಂಡು ಕೊನೆಗೆನ್ನ-ವರಲೋಕ ಕೊಯ್ವೆನೆಂದಗ್ನಿಯೆಂದ ; । ನೆರೆ ನೆನೆದ ರುಚಿಯನ್ನಕಾಗಿ ಧರ್ಮಜ್ಞಾನ-ದರಿವಾಗಲೆಂದು ಯಮಧರ್ಮನೆಂದ ; ॥ ಬರವೇಳ್ದಕಡೆ ಬರುವೆನೆಂದು ಪೂಸರ ಬಾಡ-ದಿರಲೆಂದು ತಾನಾಗಿ ವರುಣನೆಂದ ; । ಸರಳಸ್ವಭಾವದಿಂ ದೌತ್ಯವನ್ನು । ವಿರಚಿಸಿದ ನಳಭೂಮಿಪಾಲನನ್ನು । ವರಗಳಂ ಕೊಟ್ಟು ಸತ್ಕರಿಸುತಿನ್ನು । ತೆರಳಿದರು ಸುರರವರ ಲೋಕವನ್ನು ॥

ಇಂದ್ರಾದಿಗಳು ಹಿಂದಿರುಗುತ್ತಿರುವಾಗ ಕಲಿಪುರುಷನು ತಾನೂ ದಮಯಂತಿಯನ್ನು ವರಿಸುವದಕ್ಕಾಗಿ ಬರುತ್ತ ಅವರಿಗೆ ಕಾಣಿಸಿಕೊಂಡದ್ದೆಂತೆಂದರೆ—

ಭಾ|| ಕುರುಳುಚುಂಚುರುತಲೆಯು, ತಗ್ಗಿನ । ಕೊರಳ, ಕೆಂಗರಗಣ್ಣ-ಕಾಂತಿಯು, । ಹರಕುಗಡ್ಡದ, ಕೆಂಚುಮೀಸೆಯು, ಮುಲಿಸವಸನದಲಿ ॥ ನೆರೆದ ವೀರಕರಾಳಭಟರಿ । ತ್ತೆರದೊಳುಕ್ಕಿನ ತೇರಿನಲಿ ಕಲಿ । ಪುರುಷ ಕಾಣಿಸಿಕೊಂಡನಮರೇಶ್ವರನ ಸಮುಸಗುತ ॥ —(ನ. ಚಂ)

ದಮಯಂತಿಯ ಮದುವೆಯಾದ ಸುದ್ದಿಯನ್ನುಕೇಳಿ ಕಲಿಯು ಹೇಳಿದ್ದು—

ಶ್ಲೋ|| ದೇವಾನಾಂ ಮಾನುಷಂ ಮಧ್ಯೇ ಯತ್ಸಾ ಪತಿಮವಿಂದತ। ನನು ತಸ್ಯಾ ಭವೇನ್ನ್ಯಾಯ್ಯಂ ವಿಪುಲಂ ದಂಡಧಾರಣಮ್ ॥ —(ಸಂ. ಭಾರ)

ಅ|| ಅವಳು ದೇವತೆಗಳ ನಡುವೆ ಮನುಷ್ಯನನ್ನು ವರಿಸಿದ್ದು ಸರಿಯಲ್ಲ. ಅದಕ್ಕೆ ತಕ್ಕ ಶಿಕ್ಷೆಯನ್ನು ಚೆನ್ನಾಗಿ ಮಾಡಬೇಕು.

ಆಗ ಇಂದ್ರಾದಿಗಳು ತಮ್ಮ ಸಮ್ಮತಿಯಿಂದಲೇ ನಳನನ್ನು ವರಿಸಿದಳೆಂದರೂ ಸಮಾಧಾನವನ್ನು ಪಡೆಯದೆ ಕಲಿಯು ನಳದಮಯಂತಿಯರನ್ನು ಕಷ್ಟಕ್ಕೀಡುಮಾಡುವದಕ್ಕಾಗಿ ನಳನನ್ನು ಪ್ರವೇಶಮಾಡುವದಕ್ಕೆ ಸಮಯವನ್ನು ಕಾದಿದ್ದದ್ದೆಂತೆಂದರೆ—

ಸೀ|| ಶೌಚವಿಲ್ಲದವಂಗೆ ನೀಚಮಪ್ಪುದು ಬುದ್ಧಿ ;-ಬುದ್ಧಿಹೀನಂಗೆತ್ತ ಭಕ್ತಿಶುದ್ಧಿ ? । ಸಿದ್ಧಿವಿಹೀನಂಗೆ ಸಿದ್ಧಿಸುವದೇ ಮಂತ್ರ ?-ಮಂತ್ರವಿಲ್ಲದದೆಂತು ತಂತ್ರನಿಷ್ಠೆ ? । ನಿಷ್ಠೆಯಿಲ್ಲದವಂಗೆ ನಿಶ್ಚಯವೆಂತಕ್ಕು-ಮಕೃತನಿಶ್ಚಯಗಹುದು ಅಧಿಕಲೋಭ ; । ಲುಬ್ಧಂಗೆ ಸಕಲಗುಣ ಲೋಪವಾಗುವದು ;-ಅಗುಣಂಗ ನಿಷ್ಪ್ರಾಪ್ತಿ ಸಮನಿಸುವದು ; ॥ ಅಂತನರ್ಥಪರಂಪರೆಗಾದಿಯಾದ । ಶೌಚಲುಪ್ತತೆ

ನಳನೊಳೆಂತಪ್ಪುದಾಗ । ಪೊಕ್ಕು ಮೆಯ್ಯೊಳು ದುಷ್ಕರ್ಮವೆಸಗಿ ಬಿಡದೆ। ಕೆಡಿಸು ವೆನೆನುತ ಕಲಿಯು ಚಿಂತಿಸುತಲಿರ್ದಂ ॥ —(ನ. ಚಂ)

ಹೀಗಿರುವಾಗ—

ಸಾಂ॥ ಅಶುಚಿಸ್ಥಲಕೆ ಹೋಗಿಬಂದು ತಾ ಶೌಚವ । ನೆಸಗದಿಹುದ ನೋಡಿ ಕಲಿಯು ॥ ನುಸುಳುತೆ ನಳನೊಳು ಬೇಗದಿ ಜೂಜಿನ। ವ್ಯಸನವ ಬಿಡದೆ ಬ್ಬಿಸಿದ ॥

ಆಗ ಅದರ ಪರಿಣಾಮವೇನಾಯಿತೆಂದರೆ—

ಕೀ॥ ಜೂಜನಾಡಿ ಪುಷ್ಕರಗೆ ಸೋತ ನಳ । ರಾಜನು ದಮಯಂತಿಯು ಸಹಿತ ॥ ಮಾಜದೆ ವನವಾಸಕೆ ಹೊರಟನು ಜನ। ರಾಜಿ ಮರುಗೆ ಕಣ್ಣೀರಿಡುತ ॥

ಮಕ್ಕಳನ್ನು ತೌರುಮನೆಗೆ ಕಳುಹಿಸಿ ದಮಯಂತಿಯೂ ಹಿಂದೆ ಬರಲು ಆಕೆಯೊಡನೆ ನಳನು ದಾರಿಯನ್ನು ಹಿಡಿದಿರುವಾಗ—

ಸಾ॥ ಹಸಿವೆಯುಡಗೆ ಹಕ್ಕಿಗಳ ಹಿಡಿಯಲೆಂ। ದೆಸೆಯಲಾಗ ನಳ ತನ್ನ ॥ ವಸನವನವು ಕೊಂಡೊಯ್ದುವು ಜೂಜಿನ। ದೆಸೆಯನರುಹಲೆನೆ ಮುನ್ನ ॥

ಅವು ತಾವು ದಾಳಗಳೆಂದು ಹೇಳಿ ಹೋಗಲು ನಳನು ಮುಂದೆ ಹೆಚ್ಚಿನ ದುಃಖವನ್ನು ನಿರೀಕ್ಷಿಸಿ ದಮಯಂತಿಯನ್ನು ತೌರುಮನೆಗೆ ಹೋಗಹೇಳಿದಾಗ ಆಕೆ ಹೇಳಿದ್ದು—

ಮೋಹನ — ಅಟತಾಳ

ಅಗಲಲಾಪನೆ? ನಿನ್ನ। ಜಗದೊಡೆಯನೆ ಕೇಳು ॥ ಪ ॥ ಮಿಗೆ ದೇಹವನು ನೆಳಲು। ಅಗಲುವದೆಂತಯ್ಯೊ! ॥ ಅ. ಪ ॥ ನಿನ್ನೊಡನೆಯೇ ವನ। ವನ್ನು ನಾ ಸೇರುವೆನು; ॥ ಇನ್ನದೇ ಅರಮನೆ। ಎನ್ನ ಪಾಲಿಗೆ ನಾಥ ॥ ೧ ॥ ನಿನ್ನೊಡನು ಪವಾಸ। ವನ್ನು ಮಾಡುವೆ ನಾನು; ॥ ಚೆನ್ನನೆ, ಪಂಚಪ। ಕ್ವಾನ್ನವದೆನುವೆನು ॥ ೨ ॥ ನಿನ್ನ ಹಿಂದೆಯೆ ಕಷ್ಟ। ವನ್ನುಪಡುವೆ ನಾನು ॥ ಮಾನ್ಯನೆ, ಅದೇ ಸುಖ। ವೆನ್ನುತ ತಿಳಿವೆನು ॥ ೩ ॥

ಇಷ್ಟೇ ಅಲ್ಲ—

ಶ್ಲೋ॥ ನ ಚ ಭಾರ್ಯಾಸಮಂ ಕಿಂಚಿನ್ನರಸ್ಯಾರ್ತಸ್ಯ ಭೇಷಜಮ್; ॥ ನಿತ್ಯಂ ಹಿ ಸರ್ವದುಃಖೇಷು ಸತ್ಯಮೇತದ್ಬ್ರವೀಮಿ ತೇ ॥ —(ಸಂ. ಭಾರ)

ಅ॥ ದುಃಖಿತನಾದ ಮನುಷ್ಯನಿಗೆ ಎಲ್ಲ ದುಃಖಗಳಲ್ಲಿಯೂ ಯಾವಾಗಲೂ ಹೆಂಡತಿಗೆ ಸಮ ವಾದ ಔಷಧವಿಲ್ಲ. ಇದು ನಿಜ; ನಾನು ಹೇಳುತ್ತೇನೆ.

ಈ ಮಾತಿಗೆ ನಳನು ಒಪ್ಪಿದವನ ಹಾಗೆ ತೋರಿಸಿಕೊಂಡು—

ದಿಂ॥ ಇರುಳು ತಾನಾ ಸ್ತ್ರೀಯರ್ಧವಸ್ತ್ರದಲ್ಲಿ । ಮರೆಸಬೇಕೆಂದೇ ಮಲಗಿ ಮಗ್ಗಲಲ್ಲಿ ॥ ತರುಣಿಯಾಯಸದಿಂ ನಿದ್ರೆಮಾಡುವಾಗ । ಹರಿದುಕೊಂಡಲ್ಲಿಂ ಹೊರಟನವನು ಬೇಗ ॥

ಆಗ ಅವನು ಹಿಂದಕ್ಕೆ ಬಂದುಬಂದು ದಮಯಂತಿಯನ್ನು ನೋಡುತ್ತ ಹಂಬಲಿಸಿ ಕೊಂಡದ್ದು—

ವೃ॥ ಬರಸಿಡಿಲಿಂದುರುಳ್ದ ಪುರಗೋಪುರಶೃಂಗದ ಪೊನ್ನ ಬೊಂಬೆಯೋ? । ಸುರಪತಿಶಾಪದಿಂ ಧರೆಗುರುಳ್ದಮರಾಂಗನೆಯೋ? ಎನಲ್ಕನೋ ॥ ಹರತನು ರೂಪದಿಂದೆ ರತಿಯುಂ ಕಡೆಗಣ್ಚುತೆ ಸಿದ್ರೆಯುಂದೆ ಮ್ಯೆ । ಮರೆದೊರಗಿರ್ಪ ಚಂಚ ದಳಕಾಂತೆಯ ಕಾಂತೆಯನೆಂತಗಲ್ವೆ? ನಾಂ ॥ (—ನ. ನಾ)

ಟಿ॥ ಚಂಚದಳಕಾಂತೆಯ-ಹೊಳೆಯುತ್ತಿರುವ ಮುಂಗುರುಳ ತುದಿಗಳುಳ್ಳ.

ಎಂದು ದುಃಖಿಸುತ್ತ ಹೋಗುತ್ತ ಅವನು ತನ್ನಲ್ಲಿ ತಾನು ಹೇಳಿಕೊಂಡದ್ದು—

ಕಂ॥ ವನಿತಾದಿವಿಷಯಮೆನಿತುಂ । ದಿನಮುದ್ರೋಹಮಳಿವುದೆಂದದಂ ತಾಮೆ ಬಿಡಲ್ ॥ ಜನರ್ಗೆ ಸುಖಮಪ್ಪುದದೆ ತ । ಮ್ಮನೆ ತೊರೆವಂದಕಟ! ಮನಕೆ ದುಃಖಮನೀಗುಂ ॥ —(ಭ. ವೈ)

ಹೀಗೆ ಅವನು ಮುಂದೆ ಹೋದಮೇಲೆ ದಮಯಂತಿ ಎಚ್ಚತ್ತು ನೋಡಿ ಪತಿಯನ್ನು ಕಾಣದೆ ಬೆದರಿ ಸೆರಗು ಹರಿದಿರುವದನ್ನು ಕಂಡು ಗಾಬರಿಗೊಂಡು ಪತಿಯನ್ನು ಹುಡುಕಬೇಕೆಂದು ನೀಳು ಹಾದಿಯನ್ನು ಹಿಡಿದು ಬರುತ್ತಿದ್ದದ್ದು—

ಮಾ॥ ತಣ್ಣೆಲರ್ಮೆಲ್ಪಸೋಂಕಲೇಳುವಳ್ಬೀಳುವಳ್; । ಕಣ್ಣೆಟ್ಟು ತಿರುತಿರುಗಿ ನೋಡುವಳ್ಬಾಡುವಳ್; । ಬಣ್ಣಗೆಟ್ಟೆರೆಯನಂ ಕೂಗುವಳ್ಬಾಗುವಳ್ಬಾಯಾರಿ ಚೀರಿ ವಿಚಾರಿ; ॥ ಉಣ್ಣಲೇನಿಲ್ಲದಿರೆ ಬಸವಳಿದು ಸುಳಿಸುಳಿದು । ಪಣ್ಣಸರಸುತ್ತ ಲಾಲೋಕಿಪಳ್ ಶೋಕಿಪಳ್; । ಕಣ್ಣೀರನೊರಸಿಕೊಳುತೋಡುವಳ್ಬೇಡುವ ಳ್ಕಾಂತನಂ ಕಂಡ ತೆರದಿ ॥ —(ನ. ಚಂ)

ಹೀಗೆ ಬರುತ್ತಿರುವ ದಮಯಂತಿಯನ್ನು ಒಂದು ಹಾವು ನುಂಗುವದಕ್ಕೆ ಬರಲು ಆಗ ಆಕೆ ಪತಿಗೆ ಮರೆಹೊಕ್ಕದ್ದು—

ಆರಭಿ—ಆದಿತಾಳ

ಪರಿಪಾಲಿಸೊ । ಹೆ, ಪ್ರಾಣಕಾಂತ ॥ ಪ ॥ ತೊರೆದೆನ್ನನು ನೀ । ನಿರುವೆ ಯೆಂತೊ ಕಾಣೆ ॥ ಅ ಪ ॥ ನಿನ್ನ ಚಿತ್ತವೀಗಿನ ಭ್ರಾಂತಿಯ ತೊರೆ । ದಿನ್ನು ಸಹಜರೀತಿಗೆ ತಾ ತಿರುಗಲು ॥ ಎನ್ನ ನುಳಿಯುತೆಂತಿಹೆಯೆಂಬುದ ನೀ । ನಿನ್ನು ನೆನೆದು ಬಾ ಬಾ ಮನದಿನಿಯ ॥ ೧ ॥ ಕಳೆದುಹೋಗಿರುವ ರಾಜ್ಯವು ನಿನ್ನಯ । ಬಳಿಗೆ ಮತ್ತೆ ತಾನೈದಿದ ಕಾಲದಿ ॥ ನಿಳಯದೊಳೊಬ್ಬನೆಯೆಂತಿಹೆಯೆಂಬುದ । ತಿಳಿದು ಬೇಗ ಬಾ ಬಾ ಮನದಿನಿಯ ॥ ೨ ॥ ಧನವು ಧಾನ್ಯವೆಲ್ಲವು ಕೈಸೇರಿದ । ಕ್ಷಣದೊಳೆನ್ನ ನೀ ನೆನೆಯುವೆಯಲ್ಲವೆ? ॥ ಮಣಿದು ಬೇಡುವೆನು ತಪ್ಪದೆ ನೀ ಮಾ । ರ್ಗನಿಯಮಿಸಿತ್ತು ಬಾ ಬಾ ಮನದಿನಿಯ ॥ ೩ ॥

ಅಷ್ಟುಹೊತ್ತಿಗೆ ಒಬ್ಬ ಬೇಡನು ಬಂದು ಆ ಹಾವನ್ನು ಹೊಡೆದು ದಮಯಂತಿಯನ್ನು ನೋಡಿ ಕಾಮವಿಕಾರವನ್ನು ತೋರಿಸಲು ಆಕೆ ಹೇಳಿದ್ದು—

ತ್ರಿ॥ ಇಂದೆನಗೆ ಅಸುಪಿತ್ತ ತಂದೆ ನೀನಾಗಿರುವೆ; । ಕಂದಳೆಂದೆನ್ನ ನೀ ನೋಡಿದಡೆ ತಾನೆ ಮುಚು । ಕುಂದನೊಲಿಯುವನು ನಿಜವಾಗಿ ॥

ಆದರೂ ಅವನು ಮೇಲೆ ಬೀಳಬರಲು—

ಸಾ॥ ನಳನನೊಬ್ಬನನೆ ವರಿಸಿಹೆನಾದೊಡೆ । ಖಳನಿವನಳಿಯಲೆನುತ್ತ ॥ ಲಲನೆ ನುಡಿಯೆ ಕಾಳ್ಗಿಚ್ಚಿನ ಮರದಂ । ತಳಿದನಪನು ಭೋರಿಡುತ ॥

ಸ್ತ್ರೀಯರನ್ನು ಕೆಟ್ಟಕಣ್ಣಿನಿಂದ ನೋಡುವವರ ಪರಿಣಾಮವು ಹೀಗಾಗುವದೆಂದೇ ಪೂರ್ವಿಕರು ಹೇಳಿರುವದೇನೆಂದರೆ—

ಪ॥ ಸ್ತ್ರೀಯುರನು ಕಂಡು ಅಳುಪದಿರಾ ಮನವೆ. ಉದ್ದಂಡತನದಲಿ ನಡೆವ ಭಂಡರನು ಹುಳುಗೊಂಡದಲ್ಲಿಕ್ಕದೆ ಬಿಡುವನೇ ನಮ್ಮ ದೇವರಾಯನೊಡ್ಡಳಾ॥

—(ವೀ. ವ. ಶಾ)

ಅಂತು ದಮಯಂತಿಯು ಆ ಕಂಟಕದಿಂದ ಪಾರಾದಳು ವಿಚಾರಮಾಡಿದರೆ—

ಕಂ॥ ಜಲದೊಳ್ಶಿಖಿಯೊಳ್ವನದೊಳ್ । ಜಲನಿಧಿಯೊಳ್ಪರ್ವತಾಗ್ರದೊಳ್ ಕೊಳುಗುಳದೊಳ್ ॥ ಬಲುಮುರವೆನಿದ್ರೆಗಳೊಳಂ । ಸಲಹುವದು ಮನುಷ್ಯನಂ ಪುರಾಕೃತಪುಣ್ಯಂ ॥

—(ಭ. ನೀ)

ಆಮೇಲೆ ದಮಯಂತಿಯು ದಾರಿಹೋಕರೊಡನೆ ಕೂಡಿ ಚೇದಿರಾಜಧಾನಿಯಲ್ಲಿ ಹೋಗುತ್ತಿರುವಾಗ ಆ ರಾಜನ ತಾಯಿಯು ತನ್ನ ಮಗಳಿಗೆ ದಾಸಿಯಾಗಿ ಅವಳನ್ನು ಕರೆಯಲು ಆಕೆ ತನ್ನ ನಿಯಮಗಳನ್ನು ಹೇಳಿದ್ದು—

ಸೀ॥ ತಿಂದು ಮಿಕ್ಕುದ ತಿಂಬಳಲ್ಲ; ಮತ್ತೊಬ್ಬರಿಗದೆಂದಿಗುಂ ಕಾಲುಗಳ ತೊಳೆವಳಲ್ಲ; । ಬಂದ ಪರಪುರುಷರನು ಮಾತನಾಡಿಪಳಲ್ಲ;—ಕಂದುಕುಂದಿನ ನಡೆಯ ನಡೆವಳಲ್ಲ; । ಎಂದಾದೊಡೆನ್ನನೋರ್ವನು ಕಾಮಿಸಿದೊಡವನ—ಕೊಂದು ಬಿಡಬೇಕೆಂದು ಕೇಳ್ವೆ ನಾನು; । ತಂದೆಯಂತಹ ಪಾರ್ವರೆನಗೆ ಪತಿವಾರ್ತೆಯನು ತಂದಪರೆನುತ್ತವರ ನುಡಿಸುತಿಹೆನು; ॥ ಇಂದು ನಾನೀತೆರದ ಗೌಡಿಯಹೆನು; । ಸಂದೇಹವಿಲ್ಲದರೆ ಪೇಳ್ವೆಸಿದನು; । ಕಂದಳೆಂದೆನ್ನನ್ನು ನೋಡುತಿನ್ನು । ಚೆಂದದಿಂ ಪೊರೆಯಿರೀ ದಾಸಿಯನ್ನು ॥

ಈ ನಿಯಮದಿಂದ ಅಲ್ಲಿ ದಮಯಂತಿಯು ಸುಖದಿಂದಿರುವಾಗ ನಳನು ಕಾಡಿನಲ್ಲಿ ಹೋಗುತ್ತ ದೂರದಲ್ಲಿ ಕಿಚ್ಚಿಗೆ ಸಿಕ್ಕಿ ಕದಲಲಾರದೆ ಕೂಗುತ್ತಿದ್ದ ಪ್ರಾಣಿಯ ಕೂಗನ್ನು ಕೇಳಿ ಅಲ್ಲಿಗೆ ಹೋಗಿ ನೋಡಿದಾಗ ಆ ಕರ್ಕೋಟಕನೆಂಬ ಹಾವು ನಳನಿಗೆ ಹೇಳಿದ್ದು—

ಕು॥ ನಾರದರ ಶಾಪದಿಂ । ದೀರೀತಿಯಾಗಿರುವೆ; । ಪಾರುಮಾಡೆನ್ನ ನಾ ಹಗುರವಹೆನು; ॥ ದೂರವಪ್ಪುದು ಶಾಪ; । ಮಿಾರಿ ಹಿತವನು ಪೇಳ್ವೆ; । ಬಾರೆಂದು ಹೆಬ್ಬೆಟ್ಟಿನಪ್ಪಾದನು ॥

ನಳನು ಅದಕ್ಕೆ ಕೈ ಹಾಕಿದಾಗ—

ಶ॥ ಹತ್ತುಂಕವನೆಣಿ । ಸುತ್ತುಡಿಯಿಡುವುದೆ । ನುತ್ತ ಪೇಳಲಾ ರೀತಿಯುಲಿ ॥ ಮುತ್ತೀಂ 'ದಶ' ಎನೆ । ಹೊತ್ತಿನೊಳದು ಕ । ಚ್ಚಿತ್ತವನನು ತಾ ಖಾತಿಯುಲಿ ॥

ಟಿ॥ ದಶ—ಹತ್ತು, ಕಚ್ಚು.

ಅದರ ಪರಿಣಾಮವೇನಾಯಿತೆಂದರೆ—

ಭಾ॥ ದೊಡ್ಡ ಉದರದ, ಗೂನು ಬೆನ್ನಿನ, । ಅಡ್ಡವೋರೆಯ, ಗಂಟು ಮೂಗಿನ, । ದೊಡ್ಡ ಕೈಕಾಲುಗಳ, ಉದುರಿದ ರೋಮುಪಿಾಸೆಗಳ, ॥ ಜಡ್ಡು ದೇಹದ, ಗುಜ್ಜುಗೊರಲಿನ, । ಗಿಡ್ಡರೂಪಿನ, ಹರಕುಗಡ್ಡದ, । ಹೆಡ್ಡನಾದ ಕುರೂಪಿತನದಲಿ ನೃಪತಿ ವಿಷದಿಂದ ॥ —(ನ ಚ)

ಆಗ ನಳಚಕ್ರವರ್ತಿ ಮನಸ್ಸಿನಲ್ಲಿ ನಿಶ್ಚಯಿಸಿದ್ದು—

ಕಂ॥ ಪರರುಪಕಾರವನೆಸಿಸುಂ । ಸ್ಮರಿಸದೆ ಘಾತುಕರವರ್ಗೆ ಕೇಡನೆ ಬಗೆವರ್; ॥ ಉರಿಯೊಳಗಿರ್ದಾ ಪಾಪಂ । ಪೊರಪಡಿಸಲದೆನ್ನ ಕರ್ಚಿದುದೆ ದೃಷ್ಟಾಂತಂ ॥ —(ನ ನಾ)

ಆಗ ಕರ್ಕೋಟಕನು ನಳನಿಗೆ ಹೇಳಿದ್ದು—

ಭೋ॥ ನಿನ್ನ ಹಿಡಿದ ಕಲಿಗೆ ಶಿಕ್ಷೆ । ಯನ್ನು ಮಾಡಲಿಂತು ಗೈದೆ । ನಿನ್ನು ವಿಷವ್ಯಥೆಯುನವನೆ ಭೋಗಗೈವನು; ॥ ಇನ್ನಿದೀ ವಸ್ತ್ರಯುಗಳ । ವನ್ನು ಧರಿಸೆ ರೂಪು ಬಹುದು; । ಮುನ್ನಯೋಧ್ಯೆಯೊಡೆಯ ಕಲಿಪನಕ್ಷಹೃದಯುವ ॥

ಎಂದು ಕರ್ಕೋಟಕನು ವಸ್ತ್ರಗಳನ್ನು ಕೊಟ್ಟು ಅಂತರ್ಧಾನನಾಗಲು ಇತ್ತ ನಳನು ತನ್ನನ್ನು ಯಾರೂ ಅರಿಯುದಂತಿರುವದಕ್ಕೆ ಈ ಕುರೂಪವೇ ಮೇಲೆಂದು ಬಾಹುಕನೆಂಬ ಹೆಸರಿನಿಂದ ಅಯೋಧ್ಯೆಯ ಋತುಪರ್ಣರಾಯನ ಅಶ್ವಶಿಕ್ಷಕನಾಗಿದ್ದು ಪ್ರತಿದಿನವೂ ಮಲಗುವಾಗ ಹಂಬಲಿಸುತ್ತಿದ್ದದ್ದು—

ಕಂ॥ ಪಸಿವಿಂ ಬಾಯಾರಿಕೆಯಿಂ । ಬಿಸುಸುಯ್ವುತೆ ಬಳಲಿ ನೆನೆಯುತೀ ಕುಮತಿಯನಾ ॥ ಬಿಸಜಾಕ್ಷಿ ಎಲ್ಲಿ ತಾಂ ಪವ । ಡಿಸುವಳೊ ? ಹಾ ! ಯಾರ ಸೇರಿ ಜೀವಿಸುತಿಹಳೋ ? ॥ —(ಸು)

ಇತ್ತ ದಮಯಂತಿಯನ್ನು ಹುಡುಕುವುದಕ್ಕೆ ಬಂದ ಭೀಮನೃಪಾಲನ ಕಡೆಯ ಬ್ರಾಹ್ಮಣನು ದಮಯಂತಿಯನ್ನು ಗುರ್ತಿಸಲು ಚೇದಿರಾಜನ ತಾಯಿಯು ಅವಳನ್ನು ಆಗ ತನ್ನ ತಂಗಿಯ ಮಗಳೆಂದು ತಿಳಿದು ಅಲ್ಲಿಗೆ ಅವಳನ್ನು ಕಳುಹಿಸಿದಳು. ಆಮೇಲೆ ದಮಯಂತಿಯು ಒಬ್ಬ ಬ್ರಾಹ್ಮಣನನ್ನು ಕರೆದು ಪ್ರತಿಯೊಂದು ರಾಜಸಭೆಗೂ ಹೋಗಿ ಅಲ್ಲಿ ಒಂದು ಪ್ರಶ್ನೆಯನ್ನು ಹಾಕುವಂತೆ ಹೇಳಿಕಳುಹಿಸಿದಳು. ಆ ಬ್ರಾಹ್ಮಣನು ಅಯೋಧ್ಯೆಯ ಆಸ್ಥಾನಕ್ಕೆ ಬಂದು ಹೇಳಿದ್ದು—

ಕಂ॥ ನೆರೆ ಮಾರ್ಗಾಯಾಸದೆ ವೆಯ್ಯೆ । ಮರೆದು ಮಲಗಿರ್ದ ತನ್ನ ಸಹಧರ್ಮಿಣಿಯಂ ॥ ತೊರೆದು ಮಹಾರಣ್ಯದೊಳವ । ಳರೆಸೀರೆಯ ಪರಿದುಕೊಂಡು ಪೋದವನುಂಟೆ ? —(ನ. ನಾ)

ಇದನ್ನು ಕೇಳಿ ದುಃಖಗೊಂಡು ಬಾಹುಕನು ಹೇಳಿದ್ದು—

ಕಂ॥ ಹತವಿಧಿವಶದಿಂ ತನ್ನಯ । ಪತಿ ತನ್ನಂ ಕುಮತಿಯಾಗಿ ಬಿಡಲೊರ್ಮೆ ಪತಿ । ಪ್ರತೆ ಕೋಪಂಗೊಳ್ಳದೆ ಜೇ । ವಿತಮುಸವಂಗೋಸುಗಂ ತಳೆದುಕೊಂಡಿರ್ಪರ್ಳ್ ॥ —(ನ ನಾ)

ಬ್ರಾಹ್ಮಣನು ಈ ಸುದ್ದಿಯನ್ನು ತರುತ್ತಲೆ ದಮಯಂತಿಯು ಅವನೇ ನಳನಿರಬೇಕೆಂದು ನಿಶ್ಚಯಿಸಿ ಮತ್ತೆ ಅಲ್ಲಿಗೆ ಹೋಗಿ ದಮಯಂತಿಯ ಪುನಃಸ್ವಯಂವರಕ್ಕಾಗಿ ರಾಜನಿಗೆ ಆಮಂತ್ರಣವನ್ನು ಕೊಡೆಂದು ಕಳುಹಿಸಿದಳು. ಆ ಬ್ರಾಹ್ಮಣನು ಮತ್ತೆ ಆ ಸುದ್ದಿಯನ್ನು ತರುತ್ತಲೆ ಋತುಪರ್ಣನು ಪ್ರಯಾಣವನ್ನು ಬೆಳೆಸಿ ಬಾಹುಕನನ್ನು ಕರೆದು ರಥವನ್ನು ತರಹೇಳಿದನು. ಆಗ ನಳನು ವ್ಯಥೆಪಟ್ಟದ್ದು—

ನಾಯಕಿ—ರೂಪಕ

ಏತಕಿಂಥ ಆಲೋಚನೆ । ಪಾತಿವ್ರತ್ಯದ ಮೂರ್ತಿಗೆ ॥ ಪ ॥ ಮಾತೇನಾ ದಮಯಂತಿಯ । ರೀತಿಯನಾ ತಿಳಿಯಲಾರೆ ॥ ಅ ಪ ॥ ಎನ್ನ ಪಡೆಯಲೆಂದು ಪಾಯ । ಪನ್ನು ತಾನೆ ಗೈದಳೇನೊ! ॥ ಸನ್ನುತಾಂಗಿ ಎನ್ನ ಮರೆಯು । ತಿನ್ನಿದ ಹೂಡಿದಳೇನೊ! ॥ ೧ ॥ ಮಕ್ಕಳಂದಿಗಳಾದೀಕೆಗೆ । ತಕ್ಕುದೆನಿಪುದೆಂತೀ ಬಗೆ? ॥ ಕಕ್ಕುಲಿತೆಯನಿದ ತಿಳಿಯದೆ । ಸಿಕ್ಕಿದೆ ನಾನೀಗ ಕಷ್ಟಕೆ ॥ ೨ ॥

ಹೀಗೆ ಹಂಬಲಿಸುತ್ತ ಆಗ ಸಾರಥ್ಯಕ್ಕೆ ಕುಳಿತ ನಳನು ಹೇಗೆ ಕಾಣುತ್ತಿದ್ದನೆಂದರೆ—

ಚೌ॥ ಸುರಪಸಾರಥಿಯಾದ ಮಾತಲಿ–ಧರಣಿಗಿಳಿತಂದಿರ್ಪನೋ? । ತುರಗವಿದ್ಯೆಯ ಶಾಲಿಹೋತ್ರನು ಸರಸ ರೂಪನು ತಾಳ್ದನೋ? ॥ ನರಪನಹ ನಳಚಕ್ರವರ್ತಿಯೊ–ಎರಡನೆಯ ರೂಪಾಂತನೋ? । ಅರಿಯಲಾಗದೆನಲ್ಕೆ ತುರಗಪ–ಹರಿಸಿದನು ತಾನಾಕ್ಷಣ ॥

ದಮಯಂತಿಯ ಮೇಲೆ ನಟ್ಟ ಮನಸ್ಸುಳ್ಳ ಋತುಪರ್ಣನು ರಥದ ವೇಗಕ್ಕೆ ಮೆಚ್ಚಿದಾಗ ಬಾಹುಕನಿಗೂ ಅವನಿಗೂ ನಡೆದ ಸಂಬಂಧವೇನೆಂದರೆ—

ಕೀ ॥ ನಳನಿಂದಶ್ವದ ವಿದ್ಯೆಯರಿತು ನೃಪ । ನಳನಿಗಕ್ಷವಿದ್ಯೆಯ ಕಲಿಸೆ ॥ ಕಲಿ ಹೊರಟ್ಟೈದಿದ ತಾರೇಮರವನು । ನಳನಿಗೆ ಶುಭಸಂತತಿಯುದಿಸೆ ॥

ಋತುಪರ್ಣನು ತನ್ನ ಬಿಡಾರದಲ್ಲಿಳಿದುಕೊಂಡಾಗ ಒಬ್ಬ ದೂತಿ ಬಂದು ನೋಡಿ ಕೆಲವು ವಿಶೇಷಗಳನ್ನರಿತು ದಮಯಂತಿಗೆ ಹೇಳಿದ್ದು—

ಭಾ॥ ತಲೆಯ ಬಗ್ಗಿಸದವನು ಬರೆ ಬಾ । ಗಿಲೆ ವಿಶಾಲತೆ ಹೊಂದುವದು; ಕರ । ತಲದಿ ಮುಟ್ಟಿದ ಪಾತ್ರೆ ನೀರ್ದುಂಬುವದು; ಮೇಣಿನ್ನು ॥ ಚಲದಿ ಹೊಸಕಿದ ಹೂವರಳುವದು; । ಕೆಲದ ಹುಲ್ಲನು ಹಿಡಿದು ಬಾರೆನೆ । ಬಲಿದ ಬೆಂಕಿಯು ಬಂದು ತೋರ್ದುದನೇನನೆಂಬುವೆನು ॥

ಆಮೇಲೇನಾಯಿತೆಂದರೆ—

ಸಾ॥ ತನಯರ ಕಳುಹಲು ದಮಯಂತಿಯು ನಳ । ನನುನಯದಿಂದವರನ್ನು॥ ಘನತೆಗೊಟ್ಟು ಮುದ್ದಿಸಿ ತಾ ತಳೆದನು । ಮನದೊಳಗೇ ದುಃಖವನು ॥

ಆಗ ಆ ಹುಡುಗರೊಡನೆ ಬಂದಿದ್ದ ದಾಸಿ ನಳನನ್ನು ಕೇಳಿದ್ದು—

—ಝಂಪೆ—

ಆರು ಸಾರಥಿಯೆ ನೀನು ?। ಕಾಣುತ ಕು। ಮಾರರನು ಬಳಲ್ವುದೇನು ? ॥ ಸಾರಿ ಪೇಳುವದು ಕುಲನಾಮವನು ಎನ್ನೊಡನೆ । ತೋರುವದು ಜೋದ್ಯವೆನಲು । ನಳನೆಂದ ॥ —(ನ. ಜೋ. ಹಾ)

ಅದಕ್ಕೆ ನಳನ ಉತ್ತರ—

—ಝಂಪೆ—

ವನಿತೆಯಳೆ, ಕೇಳು ಎನಗೆ। ಇಂತಪ್ಪ। ತನಯರಿದ್ದರು; ಮನಸಿಗೆ ॥ ನೆನೆ ಸುತವರನು ದುಃಖಗೈದೆ ಮತ್ತೇನಿಲ್ಲ;। ವಿನುತೆ ನೀನಿಲ್ಲಿ ಬರದೆ-ತೆರಳುವದು ॥ —(ನ. ಜೋ. ಹಾ)

ಆಗ ದಮಯಂತಿಯು ನಳನನ್ನು ಮನೆಗೆ ಕರೆಸಿಕೊಂಡು ಅವನನ್ನು ಗುರ್ತಿಸಿದಾಗ ನಡೆದ ಮಾತು—

ದಿಂ॥ (ದಮ) ನುರರ ಕೈಬಿಟ್ಟುಂ ನಿನ್ನ ಪಡೆದೆನಲ್ಲ !
ಭರದಿ ನೀಂ ಗೈದಾ ಭಾಷೆ ಹೋಯಿತಲ್ಲ !
(ನಳ) ಅರರೆ ಗೈದಂ ತಾಂ ಕಲಿಯಿದೆಲ್ಲವನ್ನು ।
ವರಿಪರೇ ಪೇಳ್ನೀನಿಗಳನ್ಯನನ್ನು ॥

ಆಗ ದಮಯಂತಿಯು ಇದೆಲ್ಲವೂ ನಿನ್ನನ್ನು ಬರಮಾಡಿಕೊಳ್ಳುವುದಕ್ಕೆಂದು ಹೇಳುತ್ತಲೇ ದೇವತೆಗಳು ಪ್ರತ್ಯಕ್ಷವಾಗಿ ಅವಳನ್ನು ನಿರ್ದೋಷಿಯೆಂದು ಹೇಳಿ ವರವನ್ನು ಕೊಟ್ಟದ್ದೇನೆಂದರೆ—

ಶ್ಲೋ॥ ಕರ್ಕೋಟಕಸ್ಯ, ನಾಗಸ್ಯ, ದಮಯಂತ್ಯಾ, ನಲಸ್ಯ ಚ, । ಋತುಪರ್ಣಸ್ಯ, ರಾಜರ್ಷೇಃ ಕೀರ್ತನಂ ಕಲಿನಾಶನಮ್ ॥ —(ಸಂ. ಭಾರ)

ಆ ಕರ್ಕೋಟಕನೆಂಬ ಹಾವು, ದಮಯಂತಿ, ನಳ, ರಾಜರ್ಷಿಯಾದ ಋತುಪರ್ಣ-ಇವರನ್ನು ಸ್ಮರಿಸಿದರೆ ಕಲಿದೋಷವು ಪರಿಹಾರವಾಗುವುದು.—

ಆಮೇಲೆ ಕರ್ಕೋಟಕನು ಕೊಟ್ಟ ವಸ್ತ್ರಗಳನ್ನು ಧರಿಸುತ್ತಲೇ ನಳನಿಗೆ ಪೂರ್ವದ ರೂಪು ಬಂತು. ಆಮೇಲೆ ನಳನು ಮತ್ತೆ ಜೂಜಿಗೆ ಕೂತು ಪುಷ್ಕರನನ್ನು ಸೋಲಿಸಿ ತನ್ನ ರಾಜ್ಯವನ್ನು ಪಡೆದು ಸುಖದಿಂದಿದ್ದನು. ಈ ಸಂದರ್ಭದಲ್ಲಿ ತಿಳಿಯಬೇಕಾದದ್ದೇನೆಂದರೆ—

ತ್ರಿ॥ ಹಾಸಂಗಿ ಹರಿಯುವಡೆ, ದಾಸಿಯು ದೊರೆಯುವಡೆ, । ವೀಸಕ್ಕೆ ವೀಸ ಕೂಡುವಡೆ, ತನಗೆ। ಈಶನ ಒಲುಮೆ ಸರ್ವಜ್ಞ ॥ —(ಸ. ಪ)

ಇದನ್ನೆಲ್ಲಾ ನೋಡಿಯೇ ಕೀರ್ತನಾರಂಭದಲ್ಲಿ ಭಾಗವತೋತ್ತಮರು 'ಶುಚಿಯಾಗಿರು ಸತತ' ಎಂದು ಮೊದಲಾದ ಉಪದೇಶವನ್ನು ಮಾಡಿರುವರು.

---

# ಶಿವರಾತ್ರಿ

## ಪೀಠಿಕೆ—ಶಿವಭಕ್ತಿ

ಪಂತುವರಾಳಿ—ರೂಪಕ

ಶಿವನ ಪೂಜಿಸೊ | ಮನುಜ | ಶಿವನ ಪೂಜಿಸೊ || ಪ || ಶಿವನ ಪೂಜೆಯನ್ನು ಮಾಡೆ | ಅವನಿಯಲ್ಲಿ ಸುಲಭವೊ || ಅ ಪ || ಶಿವನು ನೋಡೆ ಸರ್ವಲೋ | ಕವನು ವ್ಯಾಪಿಸಿಹನು ನಿಜದಿ; || ಶಿವನೆ, ನಿನ್ನ ಕಾಣಬೇಕೆನೆ | ಜವದಿ ಸಗುಣನಾಗಿ ಬಹನು || ೧ ||

ಜಗತ್ತು ಎಂದೆಂದೂ ಏಕಪ್ರಕಾರವಾಗಿರುವುದೆಂದು ನಂಬಿ ಮೋಸಹೋಗಿರುವ ಪ್ರಾಪಂಚಿಕರನ್ನು ಕುರಿತು ನೀತಿಶಾಸ್ತ್ರಕಾರರು ನೆನಪುಗೊಟ್ಟಿರುವುದೇನೆಂದರೆ—

ವೃ|| ಪಲಜನರಿರ್ದ ಮಂದಿರದೊಳಿರ್ದಪನೋರ್ವನೆಯೋರ್ವನಿಪ್ಪ ತ | ನ್ನಿಲಯದೊಳಿರ್ದಪರ್ ಪಲಬರಂತ್ಯದೊಳೋರ್ವನುಮಿಲ್ಲಮಿಂತು ಚಂ || ಚಲತರರಪ್ಪ ಜೀವರನೆ ಕಾಯ್ಗಳನಾಗಿಸುತಾಡುವಂ ಧರಾ | ಫಲಕದೆ ಧೀರ ಕಾಲವಿಭು ಚಿಮ್ಮುತಿರುಳ್ಪಗಲೆಂಬ ನೆತ್ತಮುಂ || —(ಭ. ವೈ)

ಟಿ|| ಧರಾಫಲಕದೆ-ಭೂಮಿಯೆಂಬ ಹಲಿಗೆಯ ಮೇಲೆ. ಇರುಳ್ಪಗಲ್—ಹಗಲುರಾತ್ರಿ.

ಇಂಥ ಜಗತ್ತಿನಲ್ಲಿ ಹುಟ್ಟಿರುವಾಗ ಮಾಡಬೇಕಾದದ್ದೇನೆಂದರೆ—

ವೃ|| ಇದು ದಲಪೂರ್ವಮಿಾ ಮನುಜಜನ್ಮದೊಳುದ್ಭವಿಸಿರ್ದ ಮೂಕನಾ | ಗದೆ, ಸಲೆಯಂಧನಾಗದೆಲೆ, ಪಂಗುವುಮಾಗದೆ, ಕೂನದೇಹನಾ || ಗದೆ, ವಿಕಲಾಂಗನಾಗದೆ, ಕಿಮುಂಡನುಮಾಗದೆ, ಹೀನವರ್ಣನಾ | ಗದೆ, ಮರೆವಲ್ಲಿ ಮಾನವ, ಮಹೋತ್ಸವದಿಂ ನೆನೆ ಹಂಪೆಯಾಳ್ದನಂ || —(ವಿ. ಶ)

ಟಿ|| ಪಂಗು—ಕುಂಟ.

ಹಂಪೆಯಾಳ್ದವನನ್ನೇನು ಬೇಡಿಕೊಳ್ಳಬೇಕೆಂದರೆ—

ಎರಕುಲಕಾಂಭೋಜಿ—ಝಂಪೆ

ಜನ್ಮಗಳನೆನಗೆ ಕೊಡುತಿರು ಶಂಭು, ನೀನು || ಪ || ಜನ್ಮಪೀವಾಟದಿ ವಿನೋದವನು ಪಡುತ || ಅ ಪ || ಕಾಶಿಯೊಳಗಿದ್ದು ಗಂಗೆಯೊಳು ಸ್ನಾನವ ಮಾಡಿ | ಆಸೆಗಳ ತೊರೆದು ನಿರ್ಮಲಹೃದಯದಿ || ಈಶ, ಶಂಕರ, ಚಂದ್ರಚೂಡ, ಎಂದೆನುತ ವಿ | ಶ್ವೇಶನನು ಭಕ್ತಿಯಲಿ ಭಜಿಸುತಿರುವಂಥ || ೧ || ಹಿಮಗಿರಿ ಗುಹಾಂತರಾಲದಿ ಸಮಾಧಿಯೊಳಿದ್ದು | ಕ್ರಮದಿಂ ಸಮಾಧಿ ತಾನಿಳಿದ ಮೇಲೆ || ಹಿಮಕರನ ಬೆಳಕಿನೊಳು ಹೊರಬಿದ್ದು ಹಿಂದಿನಾ | ಭ್ರಮೆಗಳನು ನೆನೆನೆನೆದು ನಗುತಲಿರುವಂಥ || ೨ || ಹೊರಗೆ ಪರಿಪರಿಯ ವಿಷಯಗಳೆಲ್ಲ ಇದ್ದರೂ | ಹೊರ

ಗೆ ಬಿಡುತವುಗಳನು ಮನಕೆ ತರದೆ || ತಿರುತಿರುಗಿ ನೋಡಲೆಲ್ಲೆಲ್ಲಿಯುೂ ಚಿದ್ರೂಪ | ದರಿವಿನೊಳಗೇ ಮುಳುಗಿ ತೇಲುತಿರುವಂಥ || ೩ || —(ಭಕ್ತಿ. ಗೀ)

ಈ ಬಗೆಯ ವರವಿಲ್ಲದೆ ಮನುಷ್ಯಜನ್ಮವು ಬಂದರೂ ಪ್ರಯೋಜನವಿಲ್ಲವೆಂಬು ಒಬ್ಬರು ಹೇಳಿರುವುದೇನೆಂದರೆ—

ವೃ|| ಪ್ರಾರಬ್ಧಕರ್ಮಕಿರ್ಪಿ ದೇಹವಾ ಕರ್ಮ-ತೀರಿದರೆ ನಿಲ್ಲುವದಿಲ್ಲ; | ಮಾರಹರಪದವ ನೆನೆದವರ ಭಕ್ತರನೀಗ-ಸೇರದಿರೆ ದಾರಿಯಿಲ್ಲ; || ದೂರಮಾಡುತ ಭಕ್ತಜನರಲ್ಲದವರನೀ-ದಾರಿಯೊಳೆ ನೀನಿಲ್ಲಲು | ಧಾರಣಿಯೊಳಗೆ ಮನವೆ, ನಿನ್ನಂತೆ ಬಂಧುವಿ-ನ್ನಾರುಂಟೆನಗೆ? ನೋಡಲು ||೧|| ಹಡೆದವಳು ಹಗೆ; ಕೈಯ ಹಿಡಿದವಳು ದೊಡ್ಡ ಹಗೆ;-ಒಡಹುಟ್ಟಿದವರು ಹಗೆಯು; | ಪೊಡವಿ ಹಗೆ; ಮಕ್ಕಳುಂ ಹಗೆ; ಸಿರಿಯು ಬರಿದಾಗೆ-ಬಿಡದೆಲ್ಲ ಜನರು ಹಗೆಯು; || ಒಡೆ ಬಿಡದೆ ಕೊರಗುತಿದಕಾಗಿ ಯೋಚಿಪೆ ಮನವೆ-ನುಡಿಯುನಿದಕೇಳುತಿಂದೇ | ಪಡೆ ನೀಂ ಸ್ವತಂತ್ರವಾಗಿರುವದಾ ಮರುದೀಶ-ನಡಿಗಳ್ಳೆಸಿರಿಯದೊಂದೇ || —(ಹ. ಹಂ)

ಟಿ|| ಮರುದೀಶ-ತಿರುವಿಡ್ಡೆಮರದೂರೆಂಬ ಊರಲ್ಲಿರುವ ಶಿವನು.

ಆದ್ದರಿಂದಲೇ ಒಬ್ಬ ಭಕ್ತನು ಹಂಬಲಿಸಿಕೊಂಡಿರುವುದೇನೆಂದರೆ—

ಧನಾಸರಿ—ಆದಿತಾಳ

ಮನುಜಜನ್ಮದಲಿ ಹಾಕಿದ ಮಾತ್ರಕೆ ಘನತೆಯೇನೊ ಕಾಣೆ || ಪ || ರವಿ ಶಶಿವೈಶ್ವಾನರನಯನನೆ, ನೀ | ಮನದೊಳಗಿದ ವಿವೇಚನೆಮಾಡಿ ನೋಡೊ || ಅ ಪ || ಕರಚರಣಾದೀಂದ್ರಿಯವಿಹುದೆಂಬೆಯ? | ಧರಣಿಯೊಳೆಲ್ಲೆಲ್ಲಿಯು ನಿನ್ನ || ಇರುವಿಕೆಯನುಭವವನೆ ಕೊಳಲಾರದ | ಕರಚರಣಗಳಿಂದೇನು ಪ್ರಯೋಜನ? || ೧ || ಮನಸನು ಕೊಟ್ಟಿಹೆನೆಂದು ಪೇಳ್ವೆಯ? | ಅನಿಶವು ಮನಸಿಜನಿಗೆ ತಾನು || ಮನೆಯಾಗಿ ನಿನ್ನನು ನೆನೆಯದೆ ಇರುವಂಥ | ಮನಸನಿಟ್ಟುಕೊಂಡೇನು ಪ್ರಯೋಜನ? || ೨ || ಬುದ್ಧಿ ಇಹುದೆ ಒಂದು ಹೆಚ್ಚಿನದೆಂಬೆಯ? | ಬುದ್ಧಿಗೆ ನೀನೇಕೆ ದೂರನಾದೆ?|| ಶುದ್ಧಚಿದ್ರೂಪವ ಗ್ರಹಿಸಲಾರದಂಥ | ಬುದ್ಧಿಯನೆನಗಿತ್ತೇನು ಪ್ರಯೋಜನ? || ೩ || —(ಭಕ್ತಿ. ಗೀ)

ಶಿವಭಕ್ತಿಯ ಪ್ರಭಾವವನ್ನು ಕುರಿತು ಒಬ್ಬ ಕವಿ ಹೇಳಿರುವದೇನೆಂದರೆ—

ಶ್ಲೋ|| ಶಂಕರೇ ಭಕ್ತಿಮಾನ್ಯ್ಸಶ್ಚೇಚ್ಛಂ ಕರೇ ತಸ್ಯ ನಿಶ್ಚಿತಮ್ | ಯಾ ತನಾವಾತ್ಮಬುದ್ಧಿಸ್ತು ಯಾತನಾ ಸಾ ಸನಾತನೀ || —(ಸು. ಲಾ)

ಅ|| ಶಂಕರನಲ್ಲಿ ಭಕ್ತಿಯುಳ್ಳವನಾದರೆ (ಶಂ) ಸುಖವೆಂಬುದು (ಕರೇ) ಅವನ ಕೈಯಲ್ಲಿರುವದು ನಿಶ್ಚಯ. ಅದನ್ನು ಬಿಟ್ಟು ದೇಹವನ್ನು ನಾನೆಂದು ತಿಳಿಯುವದು ಬಹುಕಾಲದಿಂದ ಬಂದಿರುವ ರೋಗ.

ಮತ್ತೊಬ್ಬ ಕವಿ ಶಿವಮಂತ್ರಪ್ರಭಾವವನ್ನು ಹೇಳಿರುವದೇನೆಂದರೆ—

ವೃ|| ಮನದಿ 'ನಮಃ ಶಿವಾಯ' ಎನುವೀ ಘನಮಂತ್ರಮಪಾಯಕರ್ಮಕಾ| ನನಕೆ ಪರಶ್ವಧಂ, ವಿಷಮಸಂಸ್ಕೃತಿವಾರ್ಧಿಗೆ ಬಾಡಬಂ, ಪುರಾ || ತನಘನವಾಸ ನಾಗಿರಿಗೆ ವಜ್ರಮಘಾಂಧತಮಿಸ್ರಗರ್ಕ, |ವಾಸನೆಯಭಿಘಾತದಂತಿಗೆ ಮೃಗೇ ಶ್ವರಸೀಶ್ವರನ್ಯೆ ಸದಾಶಿವ || —(ಸ. ಶಿ. ಶ)

ಟಿ|| ಪರಶ್ವಧಂ—ಕೊಡಲಿ. ಅಘಾಂಧತಮಿಸ್ರಗೆ—ಪಾಪವೆಂಬ ಕಗ್ಗತ್ತಲೆಗೆ. ಅಭಿಘಾತ-ಹೊಡೆತ.

ಇಂಥ ಶಿವಮಂತ್ರವನ್ನು ಹಿಡಿದವನು ಆಯಾಸವನ್ನು ಮನಕ್ಕೆ ತರದೆ ಉತ್ಕಟವಾದ ತಪಸ್ಸನ್ನು ಮಾಡಬೇಕಾದ ಅಗತ್ಯವೇನೆಂದರೆ—

ವೃ|| ಪುಟವಿಡುವಲ್ಲಿ ಕಿಚ್ಚಿನುರಿಗಂಜಿದೊಡಾ ಕನಕಕ್ಕೆ ಕೂಡಿದಾ | ಕುಟಿ ಲತೆ ಪೋಕುಮೇ? ಮನಕಲಂಕಮಸೂದಿ ಕಳಲ್ಚಿ ಕಾಂತಿಸಂ || ಪುಟದೊಳಗಾ ತ್ಮಸಂ ನಿಲಿಸಿ ನಿರ್ಮಲನಾಗುವೆನೆಂಬ ಭವ್ಯನು | ತ್ಕಟತಪದುಬ್ಬೆಗಳ್ಕಿದೊಡೆ ಸಿದ್ಧಿಪುದೇ? ಅಪರಾಜಿತೇಶ್ವರಾ || —(ಅ. ಶ)

ಅಂಥ ಉತ್ಕಟವಾದ ತಪಸ್ಸು ಮೈಗೂಡುವುದಕ್ಕೆ ಸಹಾಯವಾಗಿ ಶಿವನನ್ನು ಬೇಡಿಕೊಳ್ಳ ಬೇಕಾದ್ದೇನೆಂದರೆ—

ವ|| ವಿಷಯವೆಂಬ ಹಸರನೆನ್ನ ಮುಂದೆ ತಂದು ಪಸರಿಸದಿರಯ್ಯಾ ಪಶುವೇನ ಬಲ್ಲದು ಹಸುರೆಂದೆಳಸುವದಲ್ಲದೆ ವಿಷಯರಹಿತನ ಮಾಡಿ ಭಕ್ತಿರಸವ ದಣಿಯೆ ಮೇಯಿಸಿ ಸುಬುದ್ಧಿಯೆಂಬುದಕವನೆರೆದು ನೋಡಿ ಸಲಹಯ್ಯಾ ಕೂಡಲಸಂಗ ಮದೇವ || —(ವೀ. ವ. ಶಾ)

ಈಶ್ವರಾನುಗ್ರಹದಿಂದ ಮೈಗೂಡಿದ ಆ ತಪಸ್ಸಿನಲ್ಲಿ ಬೇಡಿಕೊಳ್ಳಬೇಕಾದ್ದೇನೆಂದರೆ—

ಹಂಸಧ್ವನಿ—ರೂಪಕ

ವರವನೆನಗಿದೊಂದ ನೀ | ಕರುಣಿಸೈ ಸದಾ | ಶಿವನೇ || ಪ || ದುರುಳ ಜನರ ಶಿಕ್ಷಕನೆ, ಶರಣಜನರ ರಕ್ಷಕನೆ || ಅ ಪ || ಪರಿಪರಿವಿಷಯಂಗಳನನು | ಭವಿಸುವ ಸಡಗರದಲಿ | ಮರೆತು ನಿನ್ನ ಸವುಗಳೊಡನೆ ಬೆರೆತು ದುಃಖಿಯಾದೆನಲ್ಲ!|| ಪರಿಪರಿಯಾ ವಿಷಯಸುಖ | ಸ್ಫುರಣೆಯಲ್ಲಿ ನಿನ್ನ ನಾನು | ಮರೆಯದಂತೆ ನಿನ್ನ ನಾಮ | ಸ್ಮರಣೆಯಿತ್ತು ಕಾಯ್ವುದೆನ್ನ || ೧ || ಧರಣಿಯೆಂಬ ನಾಟ್ಯದ ಮಂ| ದಿರದೊಳಾಡಲೆಂದು ನೀ | ಪರಿಪರಿವೇಷಗಳೊಳೆನ್ನ | ನಿರಿಸು ನಿನಗೆ ತೋರಿ ದಂತೆ || ಪರಶಿವನೇ, ಆ ನಾಟ್ಯದ | ಭರದಿ ನನ್ನ ನಿಜವ ನಾನು | ಮರೆಯದಂತೆ ಮಾಡು ನಿನ್ನ | ಚರಣಯುಗಳದನುಗ್ರಹದಿ || ೨ || ನನಗಿರಲಿದು ನನಗಿದು ಬೇ| ಕೆನುತ ವಿವಿಧವಿಷಯವ | ನೆನೆದು ನೆನೆದು ನಿನ್ನ ಭಕ್ತಿ | ಯನುವನರಿಯದಾದೆ ನಲ್ಲ! || ನನಗಿದನು ಸಾಕೆನಿಸಿ | ಮನದಿ ಸಾಕುಬೇಕುಗಳ | ನೆನೆಯದಂತೆ ಮಾಡು ನಿನ್ನ | ಚಿನುಮಯರೂಪವನು ತೋರಿ || —(ಭಕ್ತಿ. ಗೀ)

ಹೀಗೆ ಶಿವಭಕ್ತಿಯನ್ನು ಮಾಡಿ ಯಾರು ಪಾರಾಗಿರುವರೆಂದರೆ—

ಶ್ಲೋ|| ಪ್ರಾಪ್ತಾ ಸಿದ್ಧಿಂ ಪುರಾ ವಿಪ್ರ, ಭರತಾದ್ಯಾಶ್ಚ ದೇಹಿನಃ | ಮಾಂಧಾತಾ ಧುಂಧುಮಾರಶ್ಚ ಹರಿಶ್ಚಂದ್ರಾದಯೋ ನೃಪಾಃ || —(ಸ್ಕಾಂ. ಪು)

ಅ|| ಎಲೈ ಬ್ರಾಹ್ಮಣನೆ, ಹಿಂದೆ ಭರತನೇ ಮೊದಲಾದವರೂ ಮಾಂಧಾತನೂ ಧುಂಧುಮಾರನೂ ಹರಿಶ್ಚಂದ್ರ ಮೊದಲಾದ ಅರಸರೂ ಸಿದ್ಧಿಯನ್ನು ಪಡೆದರು.

ಆದ್ದರಿಂದಲೇ ಕೀರ್ತನಾರಂಭದಲ್ಲಿ ಭಾಗವತೋತ್ತಮರು 'ಶಿವನ ಪೂಜಿಸೋ' ಎಂದು ಮೊದಲಾಗಿ ಉಪದೇಶಮಾಡಿರುವರು. ಆ ಶಿವನ ಉತ್ಪತ್ತಿಯ ಸಂಬಂಧವಾದ ಶಿವರಾತ್ರಿಯ ಆಖ್ಯಾನವು ಇಲ್ಲಿ ನಿರೂಪಣ ಮಾಡಲಾಗುವದು.

## ಆಖ್ಯಾನ.

ಕೀ|| ದಾರುಕವನದೊಳು ದಾರತಪಸಿಗಳು–ಮಾರಹರನನೇ ಭಜಿಸುತ್ತ ||
ಮಿಾರಿದ ವೈರಾಗ್ಯದ ವೈಭವನು–ತೋರುತಿದ್ದರವರನವರತ ||

ಅವರ ಯೋಗ್ಯತಾಪ್ರಭಾವವು ಆ ವನದಲ್ಲಿ ಹೇಗೆ ಕಣ್ಣಿಗೆ ಕಟ್ಟಿದಂತೆ ಕಾಣುತ್ತಿತ್ತೆಂದರೆ—

ವೃ|| ಪಸಿದೈತಂದುಣ್ಬುದಾ ಪೆಣ್ಬುಲಿಯ ಮೊಲೆಯನಲ್ಲಿರ್ದ ಸಾರಂಗ ಶಾಬಂ; | ದ್ವಿಶಿರಂ ತಾಯ್ಗಪ್ಪಿ ಪಾಯ್ದುಂಟಡಿಗೆ ಗುಟುಕನೊಲ್ದೂಡುಗುಂ; ದಂತಿಪೋತ || ಪ್ರಸರಕ್ಕಂಗಾಲಳೊಳ್ಮುಳ್ಮುರಿದೊಡುಗುರ್ಗಳಿಂ ತೀರ್ಚುಗುಂ ಸಿಂಹಮಾದು | ಬ್ಬಸಮಂ ಸರ್ಪಾರ್ಭಕಕ್ಕಾತಪದೆ ತೊಲಗಿಕುಂ ಬರ್ಹದಿಂ ಬರ್ಹಿವೃಂದಂ || —(ರಾ. ವಿ)

ತಪಸ್ವಿಗಳ ಮನಸ್ಸಿನ ಸ್ಥಿತಿಯನ್ನು ಪರೀಕ್ಷಿಸಿ ಅವರಿಗೆ ತಕ್ಕ ಅನುಗ್ರಹವನ್ನು ಮಾಡಬೇಕೆಂದು ಈಶ್ವರನು ಒಂದು ದಿನ ಮುನಿಗಳೆಲ್ಲರೂ ಹೊರಗೆ ಹೋಗಿರುವ ಸಮಯದಲ್ಲಿ ಮುನಿಪತ್ನಿಯರ ಬಳಿಗೆ ದಿಗಂಬರನಾಗಿ ಭಿಕ್ಷಕ್ಕೆ ಬಂದಿದ್ದಾನೆ. ಆಗ ಅವನ ಮುಖದ ತೇಜಸ್ಸಿಗೆ ಬೆರಗಾಗಿ ಒಬ್ಬಳು ಕೇಳಿದ್ದು—

ಶ್ಲೋ|| ಕೋಽಸಿ ತ್ವಂ ಭಿಕ್ಷುಕೋ ಭೂತ್ವಾ ಆಗತೋಽತ್ರ ಮಹಾಮತೇ || —(ಸ್ಕಾಂ. ಪು)

ಅ|| ಭಿಕ್ಷುಕನಾಗಿ ಇಲ್ಲಿಗೆ ಬಂದಿರುವ ಮಹಾತ್ಮನಾದ ನೀನು ಯಾರು?

ಅದಕ್ಕೆ ಈಶ್ವರನ ಉತ್ತರ—

ಶ್ಲೋ|| ಈಶ್ವರೋಽಹಂ ಸುಕೇಶಾಂತೇ, ಪಾವನಂ ಪ್ರಾಪ್ತವಾನಿಮಮ್ ||
—(ಸ್ಕಾಂ. ಪು)

ಅ|| ಹೇ ಸ್ತ್ರೀಯೆ, ನಾನು ಈಶ್ವರನು. ಇದು ಪವಿತ್ರವಾದ ಸ್ಥಲವೆಂದು ಇಲ್ಲಿಗೆ ಬಂದೆನು.

ಏಕೆಂದರೆ—

ಸಾ|| ಸಾತ್ತ್ವಿಕರಿತ್ತನ್ನವನುಂಡರೆ ಮನ | ಸಾತ್ತ್ವಿಕವಾಗುವುದೆಂದು || ತತ್ತ್ವವರಿತು ನಾಂ ಬಂದೆನು ನಿಮ್ಮ ಮ | ಹತ್ತ್ವವ ನೋಡಲ್ಕಿಂದು ||

ಆಗ ಇನ್ನೊಬ್ಬಳು ಪ್ರಶ್ನೆ ಮಾಡಿದ್ದು—

ಶ್ಲೋ|| ಏಕಾಕಿನಃ ಕಥಂ ದೇವ, ಭಿಕ್ಷಾರ್ಥಮಟನಂ ತವ ||

ಅ|| ಹೆ, ದೇವ, ನೀನು ಒಂಟಿಯಾಗಿ ಹೇಗೆ ಭಿಕ್ಷಕ್ಕೆ ಬಂದೆ?

ಏಕೆಂದರೆ—

ದಿಂ|| ಅರಿಯೆ ನೀನರ್ಧಾಂಗಿಯುನಗಲ್ವನಲ್ಲ! | ಏರತಿಯೊಳ್ ಜಗದೊಳ್ ನಿನ್ನ ಪೋಲ್ವರಿಲ್ಲ! || ನೆರೆ ವಿಲಕ್ಷಣನೆಂದೆಲ್ಲ ಪೇಳ್ವರಲ್ಲ! | ಅರಿವುದೆಮ್ಮಂ ನೀಂ ಬಲ್ಲವರೊಳು ಬಲ್ಲ ||

ಆಗ ಈಶ್ವರನು ಹುಸಿನಗೆಯನ್ನು ನಗಲು ಆ ಮೇಲೆ ಮತ್ತೊಬ್ಬಳು ಕೇಳುತ್ತಾಳೆ—

ಕಾಂಬೋದಿ—ಝುಂಪೆ

ಏಕೆ ಭಿಕ್ಷವು ಚರ್ಮಚೇಲ ನಿನಗೆ? || ಪ || ಶ್ರೀಕಂಠ, ನಿನ್ನಷ್ಟು ಸಹಾಯು ಒಬ್ಬರಿಗಿಲ್ಲ || ಅ ಪ || ಕನಕಾಚಲನೆ ನಿನ್ನ ಕರದೊಳಗೆ ಇಹ ಧನವು; | ಮನೆಯು ರಜತಾಚಲವು; ಅನ್ನಪೂರ್ಣೆ || ನಿನಗೆ ಪಟ್ಟದರಾಣಿ; ಲೋಕವಿಘ್ನವ ಕಳೆವ | ಗಣನಾಥ ನಿನ್ನ ಮಗ; ನೀನು ಶಿವರೂಪಿ || ೧ || ರಾಜಶೇಖರ, ನೀನು ಸಕಲ ಲೋಕಾಧ್ಯಕ್ಷ; | ರಾಜರಾಜನು ನಿನಗೆ ಪರಮಸಖನು; || ಮೂಜಗಕೆ ಪಾವನಳೆ ಜಡೆಯೊಳಗೆ ಸುರಗಂಗೆ; | ನೋಜಿಗವಿದೇನಯ್ಯ ಜಗದಿ ಶಂಕರನೆ || ೨ || ತ್ರಿನಯನನು ನೀನು ಪಂಚಾಸ್ಯ, ಬ್ರಹ್ಮನ ಮಗನು; | ನಿನಗೊಬ್ಬ ಮಗನಿಹನು ಆರುಮೊಗನು; || ಅನಿಮಿಷಪ್ರಿಯಗುರು, ಗೋಪಾಲವಿಠ್ಠಲಾ, | ನನಗೆ ಅತ್ಯಂತ ಸುಪ್ರಿಯನಾಗಿರುವ ದೇವ || ೩ || —(ದಾ)

ಆದರೂ ಶಿವನು ಭಿಕ್ಷಾವೃತ್ತಿಯನ್ನು ಹಿಡಿದಿರುವದರ ಗುಟ್ಟನ್ನು ತಿಳಿಸುವುದಕ್ಕಾಗಿ ನೀತಿಜ್ಞರು ಭಿಕ್ಷೆಯ ವಿಚಾರವನ್ನು ಕುರಿತು ಹೇಳಿರುವದೇನೆಂದರೆ—

ಶ್ಲೋ|| ಪ್ರತಿದಿನಮಯತ್ನಸುಲಭೇ, | ಭಿಕ್ಷುಕಜನನಿ, ಸಾಧುಜನಕಲ್ಪಲತೇ, || ನೃಪನಮನನರಕತಾರಿಣಿ, | ಭಗವತಿ, ಭಿಕ್ಷೇ ನಮಸ್ತುಭ್ಯಮ್ ||
—(ಸು)

ಅ|| ಪ್ರತಿದಿನವೂ ಆಯಾಸವಿಲ್ಲದೆ ದೊರೆಯುವಂಥವಳಾಗಿಯೂ, ಭಿಕ್ಷುಕರಿಗೆಲ್ಲ ತಾಯಾಗಿಯೂ ಸಜ್ಜನರಿಗೆಲ್ಲ ಕಲ್ಪವೃಕ್ಷವಾಗಿಯೂ ರಾಜನ ಕಾಲಿಗೆ ಬೀಳುವದೆಂಬ ನರಕದುಃಖವನ್ನು ದಾಟಿಸುವವಳಾಗಿಯೂ ಇರುವ ಭಿಕ್ಷೆಯೇ ನಿನಗೆ ನಮಸ್ಕಾರ—

ಭಗವದನುಗ್ರಹದ ಸಾಧನಗಳನ್ನು ಹಿಡಿದಿರುವ ಜನರು ತಮ್ಮ ಕಾಲವನ್ನು ಹೊಟ್ಟೆಗಾಗಿ ಕಳೆಯಲಪೇಕ್ಷಿಸದೆ ಸಾತ್ತ್ವಿಕರ ಮನೆಯ ಸಾತ್ತ್ವಿಕಾನ್ನವನ್ನು ಬಯಸುವ ಭಿಕ್ಷೆಯಲ್ಲದೆ ಹೊಟ್ಟೆಗಾಗಿಯೇ ತಿರಿಯುವವರಲ್ಲಿರುವ ಲಕ್ಷಣಗಳೇನೆಂದರೆ—

ಶ್ಲೋ॥ ಉಚ್ಚೈರಧ್ಯಯನಂ, ಪುರಾತನಕಥಾ, ಸ್ತ್ರೀಭಿಃ ಸಹಾಲಾಪನಂ, । ತಾಸಾಮರ್ಭಕಲಾಲನಂ, ಪತಿನುತಿಸ್ತತ್ಪಾಕಮಿಥ್ಯಾಸ್ತುತಿಃ, ॥ ಆದೇಶಸ್ಯ ಕರಾವಲಂಬನವಿಧಿಃ, ಪಾಂಡಿತ್ಯಲೇಖಕ್ರಿಯಾ, । ಹೋರಾಗಾರುಡಮಂತ್ರತಂತ್ರಕವಿಧಿರ್ಭಿಕ್ಷೋರ್ಗುಣಾ ದ್ವಾದಶ ॥ —(ಸು)

ಅ॥ ಗಟ್ಟಿಯಾಗಿ ವೇದವನ್ನು ಹೇಳುವದು, ಹಳೇಕಥೆಗಳು, ಹೆಂಗಸರೊಡನೆ ಮಾತುಕಥೆ, ಅವರ ಮಕ್ಕಳನ್ನಾಡಿಸುವದು, ಅವರ ಗಂಡಂದಿರನ್ನು ಹೊಗಳುವದು, ಅವರಡಿಗೆಯನ್ನು ಸುಳ್ಳು ಸುಳ್ಳೆ ಕೊಂಡಾಡುವದು, ಮುಂದಾಗುವ ಒಳ್ಳೆಯದನ್ನೂ ಕೆಟ್ಟದ್ದನ್ನೂ ಹೇಳುವ ಜಾಣತನ, ಪಾಂಡಿತ್ಯವನ್ನು ತೋರಿಸಿಕೊಳ್ಳುವ ಬರೆಹ, ಹುಟ್ಟಿದ ಕಾಲದ ಫಲವನ್ನು ಹೇಳುವದು, ವಿಷವನ್ನಿಳಿಸುವ ಮಂತ್ರ, ಚಿಕಿತ್ಸೆ, ಕೈಚಮತ್ಕಾರ-ಹೀಗೆ ಭಿಕ್ಷುಕನಿಗೆ ಹನ್ನೆರಡು ಗುಣಗಳು

ಈ ಬಗೆಯ ಭಿಕ್ಷುಕತ್ವವು ಕೆಟ್ಟದ್ದೇ ಹೊರತು ಇನ್ನೊಂದು ದೃಷ್ಟಿಯಿಂದ ಭಿಕ್ಷುಕನಾಗಿರುವದು ನಮ್ಮ ದೇಶದಲ್ಲಿ ಭೂಷಣವಾಗಿಯೇ ಎಣಿಸಲ್ಪಡುವದು. ಅದು ಯಾವದೆಂದರೆ—

ಶ್ಲೋ॥ ಸ್ವಾನಂದಭಾವೇ ಪರಿತುಷ್ಟಿಮಂತಃ । ಪ್ರಶಾಂತಸರ್ವೇಂದ್ರಿಯವೃತ್ತಿಮಂತಃ ॥ ನಾಂತಂ ನ ಮಧ್ಯಂ ನ ಬಹಿಃ ಸ್ಮರಂತಃ । ಕೌಪೀನವಂತಃ ಖಲು ಭಾಗ್ಯವಂತಃ ॥ —(ಕೌ. ಪಂ)

ಅ॥ ತನ್ನ ಆನಂದದಲ್ಲಿ ತಾನು ತೃಪ್ತನಾಗಿ ಎಲ್ಲ ಇಂದ್ರಿಯಗಳ ವೃತ್ತಿಗಳನ್ನೂ ಹಿಡಿತದಲ್ಲಿಟ್ಟುಕೊಂಡು ಕೊನೆಯದನ್ನೂ ನಡುವಿನದನ್ನೂ ಹೊರಗಣದನ್ನೂ ಮನಸ್ಸಿಗೆ ತಂದುಕೊಳ್ಳದೆ ಕೌಪೀನವನ್ನು ಹಾಕಿಕೊಂಡಿರುವವನು ಭಾಗ್ಯವಂತನು.

ಈಶ್ವರನು ಅಂಥವರ ಅಧಿಪತಿಯಾಗಿದ್ದನು. ಅವನ ದರ್ಶನದಿಂದ ತಾವು ಧನ್ಯರಾದೆವೆಂದು ಋಷಿಪತ್ನಿಯರು ಆದರದಿಂದ ಅವನಿಗೆ ಭಿಕ್ಷೆಯನ್ನು ಹಾಕಿದರು. ಆಗ ಅವನು—

ಸಾಂ॥ ಇತ್ತವರಿಗೆ ತಾನು ಕೊಡುವ ಸಿಯಮವನ್ನು । ಚಿತ್ತಕ್ಕೆ ತಾರದೆ ಶಿವನು ॥ ಇತ್ತ ತಪಸ್ವಿಪತ್ನಿಯರಿಂದಲೇ ಮತ್ತೆ । ಚಿತ್ತವನಪಹರಿಸಿದನು ॥

ಆಗ ಈಶ್ವರನಿಗೆ ಪರವಶರಾದ ಸ್ತ್ರೀಯರು ಅವನ ಚೈತನ್ಯಸ್ವರೂಪವನ್ನರಿಯದೆ ಅವನ ಸೌಂದರ್ಯಕ್ಕೆ ಮರುಳಾದವರಾಗಿ ಕಾಮುಕತೆಯಿಂದ ಅವನನ್ನು ಬೇಡಿದ್ದೇನೆಂದರೆ—

ಸುರುಟಿ—ಆದಿತಾಳ

ಕರುಣಿಸು ಪರಮೇಶಾ, । ಪುರಹರ, । ಸುರುಚಿರಶಶಿಭೂಷಾ ॥ ಪ ॥ ಶರಣಾಗತಪರಿಪಾಲಿತ, ಸುಲಲಿತ । ಚರಣಾಂಬುಜವನು ಸ್ಮರಿಸುವೆ ಅನುದಿನ ॥ ಅ ಪ ॥ ಪಂಚವದನ, ದೇವಾ, । ಸುರಪವಿ । ರಿಂಚಿಗಿಷ್ಟವನೀವಾ ॥ ಪಂಚೇಂದ್ರಿಯಕುಲದೂರ, ಸದಾಶಿವ, । ಪಂಚಹೃದಯ, ರಜತಾಚಲವಾಸ ॥ ೧ ॥ ಪಾಲಿತಸುರನಿಕರಾ, । ಪಶುಪತಿ, । ಕಾಲಹರಶರೀರ, ॥ ನೀಲಕಂಠ, ನಿಗಮಾಗಮಸನ್ನುತ, । ಶೈಲರಾಜತನುಜೇಶ, ಮಹೇಶ ॥ ೨ ॥ ಶೇಷಾಭರಣಧರಾ, । ಶಶಿಸಂ । ಕಾಶ, ಮಹೇಶ, ಸುರಾ ॥ ಧೀಶ, ಕುಡುಮಪುರ । ವಾಸ, ತ್ರಿಪುರಹರ,। ಪಾಶವಿಧೃತಕರ, ಶ್ರೀಶ, ಮಂಜುನಾಥ ॥ ೩ ॥ —(ದಾ)

ಆ ಸ್ತ್ರೀಯರ ಇಂಗಿತವನ್ನರಿತು ಪರಮೇಶ್ವರನು ಹೇಳಿದ್ದು—

ಶ್ಲೋ॥ ತಯಾ ಸತ್ಯಾ ವಿನಾ ಕಿಂಚಿತ್ಸ್ತ್ರೀಮಾತ್ರಂ ಮಮ ಭಾಮಿನಿ, ॥ ನ ರೋಚತೇ ವಿಶಾಲಾಕ್ಷಿ, ಸತ್ಯಂ ಪ್ರತಿವದಾಮಿ ತೇ ॥ —(ಸ್ಕಾಂ. ಪು)

ಅ॥ ಅಮ್ಮ, ನಿಜವಾಗಿ ಹೇಳುತ್ತೇನೆ. ಆ ಸ್ತ್ರೀಯ (ಪಾರ್ವತಿಯ) ಹೊರತು ಬೇರೆಯಾವ ಸ್ತ್ರೀಯೂ ನನಗೆ ರುಚಿಸುವದಿಲ್ಲ.

ಆಗ ಸ್ತ್ರೀಯರು ಬೆರಗಾದದ್ದು—

ಚೌ॥ ಅರಿವೆಯಿಲ್ಲದನಾಗಿಯುಂ ನಿಜ—ದರಿವೆಯ ಮಾಪಂತಿರ್ಪನು; । ತರುಣಿಯರು ಪುಂದಿರಲು ಕಾಮಾ—ತುರತೆಗೆಡೆಗೊಡದಿರ್ಪನು; ॥ ಧರೆಯೊಳಿವನು ವಿರಕ್ತಜನಕೀ—ಶ್ವರನೆನಿಸಿಕೊಳೆ ಸಲ್ವನು; । ಕರುಣದಿಂದೆಮಗಿದನೆ ತಾನೀ—ತೆರದೊಳುಪದೇಶಿಸುವನು ॥

ಟಿ॥ ಅರಿವೆ—ವಸ್ತ್ರ. ಅರಿವೆ—ಜ್ಞಾನವೆ.

ಋಷಿಪತ್ನಿಯರು ಹೀಗೆ ಹೇಳುತ್ತ ಶಿವನನ್ನು ಹಿಂಬಾಲಿಸಿ ಹೋಗಿದ್ದಾಗ ಋಷಿಗಳು ಆಶ್ರಮಕ್ಕೆ ಹಿಂದಿರುಗಿ ಬಂದು ತಮ್ಮಲ್ಲಿ ತಕ್ಕಷ್ಟು ವಿವೇಕವಿಲ್ಲದ್ದರಿಂದ ಈಶ್ವರನೇ ಕಾಮುಕನಾಗಿ ತಮ್ಮ ಪತ್ನಿಯರನ್ನಪಹರಿಸಿರುವನೆಂದು ತಮ್ಮಲ್ಲಿರುವ ಕಾಮುಕತ್ವವನ್ನು ಅವನ ಮೇಲೆ ಆರೋಪಿಸಿ ಹೇಳಿದ್ದು—

ಶ್ಲೋ॥ ಕಿಂ ಕೃತಂ ಹಿ ತ್ವಯಾ ಶಂಭೋ, ವಿರಕ್ತೇನ ಮಹಾತ್ಮನಾ। ಪರದಾರಾಪಹರ್ತಾಸಿ ತ್ವಮೃಷೀಣಾಂ ನ ಸಂಶಯಃ ॥ —(ಸ್ಕಾಂ. ಪು)

ಅ॥ ಶಿವನೆ, ನೀನು ವಿರಕ್ತನೂ ಮಹಾತ್ಮನೂ ಆಗಿ ಎಂಥ ಕೆಲಸವನ್ನು ಮಾಡಿದೆ! ನೀನು ನಮ್ಮ ಭಾಗಕ್ಕೆ ಪರರ ಹೆಂಡಿರನ್ನು ಅಪಹರಿಸಿದವನಾಗಿದ್ದಿ. ಸಂಶಯವಿಲ್ಲ.

ಹೀಗೆಂದು ಅವರು ಶಾಪವನ್ನು ಕೊಟ್ಟದ್ದು—

ಕಂ॥ ಪುರುಷನಾಗಿಹ ನೀನು । ಪರನಾರಿಯರುಗಳಪ । ಹರಣೆಯಿಂ ದೂಷ್ಯನಾಗಿಹುದರಿಂದ ॥ ಪುರುಷತ್ವಹೀನನಾ । ಗಿರು ಲೋಕದೊಳಗೆಂದು । ಭರದೊಳುಚ್ಚರಿಸಿದರು ಕೋಪದಿಂದ ॥

ಈಶ್ವರನು ಸರ್ವಸಮರ್ಥನಾದರೂ—

ಶ॥ ವನದೊಳಗಿರುತೆ । ನ್ನನು ನಿಜಭಾವದಿ । ದಿನದಿನವುಂ ಪೂಜಿಸಿದವರ ॥ ನೆನಹು ಬಂಜೆಯೆಂದೆನಿಸದಂತೆ ತಾ ॥ ಘನತೆಗೊಟ್ಟನದಕಾಗ ಹರ ॥

ಒಡನೆ ಈಶ್ವರನ ಜನನನೇಂದ್ರಿಯಗೋಲವು ನೆಲದ ಮೇಲೆ ಬಿತ್ತು. ಆಗ ನಡೆದ ವಿಶೇಷವೇನೆಂದರೆ—

ಭಾ॥ ಒಡನೆ ತೋರ್ದುದು ಬಿಗಿದ ಬೆಳಕಿನ । ಗಡಣವದು ಬೆಳೆಬೆಳೆಯುತಲ್ಲಾ । ಕಡೆಯೊಳಗೆ ಹಬ್ಬಿದುದು ದಶದಿಕ್ಕುಗಳನಾವರಿಸಿ; ॥ ಅಡಗಿಸಿತು ತನ್ನುದರದೊಳಗೀ । ಪೊಡವಿಯೆಲ್ಲವ; ದೇವತತಿ ಕಂ । ಗೆಡುತ ಹರಿವಿಧಿಗಳಿಗೆ ಬಿನ್ನಹಗೈದರೀ ಹದನ ॥

ಆ ತೇಜಸ್ಸು ಎಷ್ಟರ ಮಟ್ಟಿಗೆ ಬೆಳೆದಿತ್ತೆಂಬುದನ್ನು ಕುರಿತು ಪುರಾಣಕಾರರು ಹೇಳಿರುವದೇನೆಂದರೆ—

ಶ್ಲೋ॥ ನಾಸೀದ್ದ್ವೈತಪಭಾಗಂ ಚ ಸರ್ವಂ ಲೀನಂ ಚ ತತ್ಕ್ಷಣಾತ್ ॥
ಲಯನಾಲ್ಲಿಂಗಮಿತ್ಯೇವಂ ಪ್ರವದಂತಿ ಮನೀಷಿಣಃ ॥ —(ಸ್ಕಾಂ. ಪು)

ಅ॥ ಇದು ಬೇರೆ, ಅದು ಬೇರೆ-ಎಂಬುದೇ ಇಲ್ಲದಂತಾಯಿತು. ಎಲ್ಲವೂ ಒಡನೆ ಲಯವಾಗಿ ಹೋಯಿತು. ಲಯವಾದ್ದರಿಂದ ಲಿಂಗವೆಂದು ಪಂಡಿತರು ಹೇಳುವರು.

ಹೀಗೆ ಪ್ರಪಂಚವೇ ಲಯವಾದರೆ ಮುಂದೆ ಗತಿಯೇನೆಂದು ದೇವತೆಗಳು ಹೇಳಲು ಆ ಜ್ವಾಲಾಲಿಂಗದ ತುದಿಮೊದಲನ್ನು ಕಂಡು ಮುಂದಿನ ಯೋಚನೆಯನ್ನು ನಡೆಸಬೇಕೆಂದು—

ಶ್ಲೋ॥ ವಿಷ್ಣುರ್ಗತೋ ಹಿ ಪಾತಾಲಂ ಬ್ರಹ್ಮಾ ಸ್ವರ್ಗಂ ಜಗಾಮ ಹ ॥
—(ಸ್ಕಾಂ. ಪು)

ಅ॥ ವಿಷ್ಣು ಪಾತಲದ ಕಡೆಗಿಳಿದನು. ಬ್ರಹ್ಮನು ಸ್ವರ್ಗದ ಕಡೆಗೇರಿದನು.

ಪಾತಾಲಕ್ಕೆ ಹೋದ ವಿಷ್ಣು ಆ ಲಿಂಗದ ಬುಡವನ್ನು ಕಾಣಲರಿಯದೆ ಕೊನೆಗೆ ತನ್ನ ನಿರಭಿಮಾನವನ್ನು ಪ್ರಕಟಿಸಿದ್ದೇನೆಂದರೆ—

ಮುಖಾರಿ—ಆದಿತಾಳ

ತಿಳಿವೆನೆಂತು? ನಾ ಚಂದ್ರಚೂಡ ನಿನ್ನ । ಸುಲಭವಾಗಿ ನೀ । ನೊಲಿಯದಿದ್ದರೆ ॥ ಪ ॥ ಕಲಿಕಲ್ಮಷಾವಿಷ್ಟವಾಗಿದ್ದು । ನೆಲೆಗೆ ನಿಲ್ಲದ ಮನದಿಂದಲಿ ॥ಅ.ಪ॥ ಸ್ಥೂಲದೇಹವನ್ನು ತಾಳಿ ನಿನ್ನ ಬಹು । ಲೀಲೆಗಳನು ಹೊರಗೆ ಹಾಕದಿರೆ ॥ ಬಾಲತನದ ನಾನು ಹೃದಯದೊಳಗಣ । ಕೀಲ ನೆಲೆಯನು ಅರಿಯಲಾರೆನು ॥ ॥ ೧ ॥ ಆದಿಯಿಲ್ಲದೆ ಅಂತ್ಯವಿಲ್ಲದೆ । ಹೋದರೆ ನನ್ನ ಇಂದ್ರಿಯಂಗಳು ॥ ಆದರದಿಂದರಿವುದಕೆ । ಸಾಧ್ಯವೆ? ಪೇಳೈ ದೇವ ನಿನ್ನ ॥ ೨ ॥ ಅತಿ ದೊಡ್ಡದಕಿಂತತಿದೊಡ್ಡವನು; । ಅತಿ ಚಿಕ್ಕದಕಿಂತತಿಚಿಕ್ಕವನು; ॥ ಅತಿಯನ್ನು ನೀ ಬಿಡದಿರೆ ಮಂದ । ಮತಿಯಿಂದ ಚಿತ್ಸ್ಥಿತಿಯಂದವನು ॥ ೩ ॥ —(ಭಕ್ತಿ. ಗೀ)

ಮೇಲಕ್ಕೆ ಹೋದ ಬ್ರಹ್ಮನು ತುದಿಯನ್ನು ಕಾಣದೆ ವ್ಯಥೆಗೊಂಡು ಹೇಳಿದ್ದು—

ಶ್ಲೋ॥ ನ ದೃಷ್ಟಂ ಮಸ್ತಕಂ ತಸ್ಯ ವ್ಯಾಪಕಸ್ಯ ಮಹಾತ್ಮನಃ । ಕಿಂ ವಕ್ಷ್ಯೇಽಹಂ ಚ ದೇವಾಗ್ರೇ ಚಿಂತಾ ಮೇ ಚಾತಿವರ್ತತೇ ॥ —(ಸ್ಕಾಂ. ಪು)

ಅ॥ ಆ ಸರ್ವವ್ಯಾಪಿಯಾದ ಮಹಾತ್ಮನ ತಲೆಯನ್ನು ನಾನು ಕಾಣಲಿಲ್ಲ. ದೇವತೆಗಳ ಮುಂದೇನು ಹೇಳಲಿ? ನನಗೆ ಬಹಳ ಯೋಚನೆಯಾಗಿದೆ.

ಇಷ್ಟರಲ್ಲಿ ವಿಷ್ಣು ಮೊದಲೇ ಹಿಂದಿರುಗಿ ಬಂದು ತಾನು ಅಡಿಯನ್ನು ಕಾಣಲಿಲ್ಲವೆಂದು ಹೇಳಿದ್ದನು. ಆಮೇಲೆ ಬ್ರಹ್ಮನು ಬಂದು ತನ್ನ ಪ್ರತಿಷ್ಠೆಯನ್ನು ಬೆಳೆಸಿಕೊಳ್ಳುವದಕ್ಕಾಗಿ ತಾನು ತಲೆಯನ್ನು ಕಂಡೆನೆಂದು ಹೇಳಿದನು. ಜ್ಞಾನದೃಷ್ಟಿಯಿಂದ ನಿಶ್ಚಯವನ್ನರಿತಿದ್ದ ವಿಷ್ಣು ಆಗ ಪ್ರಶ್ನೆ ಮಾಡಿದ್ದು—

ಶ್ಲೋ॥ ದೃಷ್ಟಂ ಹಿ ಚೇತ್ತ್ವಯಾ ಬ್ರಹ್ಮನ್ಮಸ್ತಕಂ ಪರಮಾರ್ಥತಃ ।
ಸಾಕ್ಷಿಣಃ ಕೇ ತ್ವಯಾ ತತ್ರ ಅಸ್ಮಿನ್ನರ್ಥೇ ಪ್ರಕಲ್ಪಿತಾಃ ॥ —(ಸ್ಕಾಂ. ಪು)

ಅ॥ ಬ್ರಹ್ಮನೆ, ನೀನು ನಿಜವಾಗಿ ತಲೆಯನ್ನು ಕಂಡಿದ್ದರೆ ಅದಕ್ಕೆಯಾರನ್ನು ಸಾಕ್ಷಿಗಳನ್ನಾಗಿ ಮಾಡಿದ್ದಿ?

ಆಗ ಬ್ರಹ್ಮನು ತಾನು ಮೊದಲೇ ಸಿದ್ಧಗೊಳಿಸಿದ ಎರಡು ಸಾಕ್ಷಿಗಳನ್ನು ಕರೆಯುತ್ತಲೆ—

ಭೋ॥ ಬಂದಿತಾಕಳೊಂದು ಮೇಲಿ । ನಿಂದ ವಿಧಿಯು ಮಾತು ಸತ್ಯ । ವೆಂದು ನುಡಿಯುತಾಗ ಹಿಂದುಮುಂದು ನೋಡದೆ; ॥ ಬಂದಿತೊಂದು ಕೇತಕಿಯು ಸು । ಗಂಧವನ್ನು ಬೀರುತಾಗ । ನಿಂದು ನುಡಿದುದಬ್ಜಭವನು ಕಂಡನೆನುತಲಿ ॥

ಆಗ ಎಲ್ಲರೂ ಬೆರಗಾಗಿ ಆಕಾಶವನ್ನು ನೋಡಲು ಆಕಾಶವು ಹೇಳಿದ್ದು—

ಶ್ಲೋ॥ ಸುರಭ್ಯಾ ಚೈವ ಯತ್ಪ್ರೋಕ್ತಂ ಕೇತಕ್ಯಾ ಚ ತಥಾ ಸುರಾಃ ।
ತನ್ಮೃಷೋಕ್ತಂ ಚ ಜಾನೀಧ್ವಂ ನ ದೃಷ್ಟೋ ಹ್ಯಸ್ಯ ಮಸ್ತಕಃ ॥—(ಸ್ಕಾಂ ಪು)

ಅ॥ ದೇವತೆಗಳೆ, ಆಕಳು ಹೇಳಿದ್ದು ಮತ್ತು ಕೇತಕಿಯು ಹೇಳಿದ್ದೂ ಸುಳ್ಳುಮಾತು. ಇವನ ತಲೆಯನ್ನು ಅವನು ಕಾಣಲಿಲ್ಲವೆಂದು ನೀವು ತಿಳಿದುಕೊಳ್ಳಿ.

ಆಗ ದೇವತೆಗಳು ಆಕಳ ವಿಷಯವಾಗಿ ಮನಸ್ಸಿನಲ್ಲಿ ಯೋಚಿಸಿ ಹೇಳಿದ್ದು—

ಸಾ॥ ತನ್ನಯ ಹಾಲನು ಕುಡಿಯುವ ಕರುವಿನ । ಬೆನ್ನ ನೆಕ್ಕುವೀ ಜಾತಿ ॥ ಬಿನ್ನಣದಿಂ ಸಟೆಯಾಡುವದರಿದೇ? । ಇನ್ನಿದೆ ತನ್ನಯ ರೀತಿ ॥

ಆಮೇಲೆ ಅವರು ಕೇತಕಿಯ ವಿಷಯವಾಗಿ ಯೋಚಿಸಿ ಹೇಳಿದ್ದು—

ಶ್ಲೋ॥ ಪತ್ರಾಣಿ ಕಂಟಕಶತೈಃ ಪರಿವೇಷ್ಟಿತಾನಿ; । ವಾರ್ತಾಪಿ ನಾಸ್ತಿ ಮಧುನೋ; ರಜಸಾಂಧಕಾರಃ; ॥ ಆಮೋದಮಾತ್ರರಸಿಕೇನ ಮಧುವ್ರತೇನ । ನಾಲೋಕಿತಾನಿ ತವ ಕೇತಕಿ ದೂಷಣಾನಿ ॥ —(ಸು)

ಅ॥ ಎಲೈ ಕೇತಕಿಯೆ ಎಲೆಗಳು ನೂರಾರು ಮುಳ್ಳುಗಳಿಂದ ಮುಸುಕಿವೆ; ಪುಷ್ಪರಸದ ಸುದ್ದಿಯೇ ಇಲ್ಲ; ಧೂಲಿ ತುಂಬಿದೆ; ನಿನ್ನ ಈ ದೋಷಗಳನ್ನು ವಾಸನೆಯ ಮಾತ್ರದಲ್ಲಿ ಆಸಕ್ತವಾದ ಭ್ರಮರವು ನೋಡಲಿಲ್ಲ.

ಸುಳ್ಳುಗಾರನ ಹಣೆಯ ಬರಹವೇ ಇಷ್ಟೆಂದು ಮತ್ತೆ ಹೇಳಿದ್ದೇನೆಂದರೆ—

ಶ್ಲೋ॥ಜಿಹ್ವೈಕೇವ ಸತಾಮುಭೇ ಫಣವತಾಂ; ಸ್ರಷ್ಟುಶ್ಚತಸ್ರಶ್ಚ;ತಾ। ಸ್ಸಪ್ತ ಸಪ್ತೈವ ವಿಭಾವಸೋರ್ನಿಯಮಿತಾಃ; ಷಟ್ಕಾರ್ತಿಕೇಯಸ್ಯ ಚ; ॥ ಪೌಲಸ್ತ್ಯಸ್ಯ ದಶಾಭವತ್; ಫಣಿಪತೇರ್ಜಿಹ್ವಾ ಸಹಸ್ರದ್ವಯಂ; । ಜಿಹ್ವಾ ಲಕ್ಷಶತೈಕಕೋಟಿನಿಯಮೋ ನೋ ದುರ್ಜನಾನಾಂ ಮುಖೇ ॥ —(ಸು)

ಅ॥ ನಾಲಿಗೆ ಸಜ್ಜನರಿಗೆ ಒಂದೆ; ಹಾವುಗಳಿಗೆ ಎರಡು; ಬ್ರಹ್ಮನಿಗೆ ನಾಲ್ಕು; ಅಗ್ನಿಗೆ ಏಳು; ಕುಮಾರಸ್ವಾಮಿಗೆ ಆರು; ರಾವಣನಿಗೆ ಹತ್ತು; ಆದಿಶೇಷನಿಗೆ ಎರಡುಸಹಸ್ರ; ದುರ್ಜನರಿಗೆ; ಲಕ್ಷವೋ ಕೋಟಿಯೋ ನಿಯಮವೇ ಇಲ್ಲ.

ಹೀಗೆ ಯೋಚಿಸಿ ದೇವತೆಗಳು ಆ ಸುಳ್ಳುಸಾಕ್ಷಿಗಳಿಗಿಬ್ಬರಿಗೂ ಶಾಪವನ್ನು ಕೊಟ್ಟದ್ದು—

ಶ್ಲೋ|| ಅಪವಿತ್ರಂ ಮುಖಂ ತೇಽಸ್ತು ಸರ್ವಧರ್ಮಬಹಿಷ್ಕೃತಃ | ಸುಗಂಧಕೇತಕೀ ಚಾಪಿ ಅಯೋಗ್ಯಾ ತ್ವಂ ಶಿವಾರ್ಚನೇ ॥ —(ಸ್ಕಾಂ. ಪು)

ಅ|| ಎಲೆ ಆಕಳೆ, ಎಲ್ಲ ಧರ್ಮಕ್ಕೂ ಹೊರಗಾದ ನಿನ್ನ ಮುಖವು ಅಪವಿತ್ರವಾಗಲಿ; ಎಲೆ ಕೇತಕಿಯೆ, ನೀನು ಶಿವನ ಪೂಜೆಗೆ ಯೋಗ್ಯವಾಗಬೇಡ.

ಈ ಸುಳ್ಳಿನಿಂದ ಬ್ರಹ್ಮನಿಗಾದ ಪರಿಣಾಮವೇನೆಂದರೆ—

ಕ|| ಪರಮೇಷ್ಠಿಯಾಗಿ ತಾ | ನಿರುತ ಸುಳ್ಳಾಡುತ್ತ | ಸುರರಿಗುಂ ಮೋಸಮಂ ಗೈದ ಕತದಿ || ಧರೆಯೊಳಗೆ ಪೂಜ್ಯತೆಯು | ನೆರೆ ಕಳೆದುಕೊಂಡು ತಾ| ನಿರುವನೆಲ್ಲಿಯೊ ಮುಂದೆ ಬರದೆ ಜಗದಿ ||

ಆಗ ಆ ಸುಳ್ಳುಗಾರರೆಲ್ಲರೂ ಮನಸ್ಸಿನಲ್ಲಿ ವ್ಯಥೆಗೊಂಡದ್ದು—

ತೋಡಿ—ಝಂಪೆ

ಬಲ್ಲರೊಳು ಸಲ್ಲದೈ ಖುಲ್ಲ ಮಾತುಗಳು; | ನಿಲ್ಲದಾಯುಷ್ಕೀರ್ತಿ ಜನರ ಮಧ್ಯದೊಳು || ಪ || ಅರಸು ಸಣ್ಣವನೆಂದು ಸರಸವಾಡಲುಸಲ್ಲ; | ಕರೆಸಿ ಕೇಳದ ಮಾತು ಆಡಸಲ್ಲ; || ಪರಸತಿಯ ಮನೆಯೊಳಗೆ ಇರಿಸಿಕೊಂಡಿರಸಲ್ಲ; | ಬೆರೆಸಿ ಬಹಪಾತಕವ ಅರಸುವರೆ ಸಲ್ಲ || ೧ || ಹಗಲು ಕಳ್ಳನ ಕೈಯ ಜಗಳವಾಡಲು ಸಲ್ಲ; | ಹಗೆಯೊಡನೆ ಸ್ನೇಹವನು ಮಾಡಸಲ್ಲ; || ಜಗಳಗಂಟಿಕ್ಕುವನ ಮೊಗದೊಳಗೆ ನಗೆ ಇಲ್ಲ; | ಅಗಲಿಪೋಗುವೆನೆಂಬ ಮಗನ ಸೊಗಸಿಲ್ಲ || ೨ || ಬಿಡೆಯ ವಿಲ್ಲದ ಊರು ಬಡವರಿಗೆ ಅಳವಲ್ಲ; | ಕಡುಚೆಲ್ವೆ ಕುರುಡನಿಗೆ ಮಡದಿಯಹ ಸಲ್ಲ; || ನುಡಿಯುತಿಳಿಯದೆ ಇಹ ಸಾಕ್ಷಿಯನು ಇಡಸಲ್ಲ; | ದೃಢವಾದ ಮೂರ್ಖನೊಳು ಕಡನ ಮಾತಿಲ್ಲ || ೩ || ಹರಿದಾಸರೆನಿಸಿದರೆ ಪರಗತಿಯೊಳೆರವಿಲ್ಲ;| ಗುರು ಹಿರಿಯರಾದವರ ಜರಿಯಸಲ್ಲ; || ಕರೆಕರೆಯ ಬದುಕಿನೊಳು ಬರುವ ಉಡುಗೊರೆ ಇಲ್ಲ; | ಮರವಿನೊಳು ಹಗೆಯುರಗ ಗೆಲುವ ಪರಿ ಸಲ್ಲ || ೪ || ಹರಿಯು ಮುನಿದರೆ ಮನೆಯೊಳಿರಿಸಿಕೊಂಬುವರಿಲ್ಲ; | ಹರಿಯೊಲಿದ ನರನೊಳಗೆ ಗೆಲುವ ಪರಿಯಿಲ್ಲ; | ಸಿರಿಯರಸ ವರಹತಿಮ್ಮಪ್ಪನಿರವನು ಬಲ್ಲ | ನರನು ಹರಿದೂಷಕರ ಸರಿಯೊಳಗೆ ನಿಲ್ಲ || ೫ || —(ದಾ)

ಈ ಪ್ರಕಾರ ಹರಿಬ್ರಹ್ಮರಿಬ್ಬರೂ ಆ ಲಿಂಗದ ತುದಿಮೊದಲನ್ನು ಕಾಣುವದಕ್ಕಾಗದ ಮೇಲೆ ಅದರಿಂದಾಗಿರುವ ಸಂಕಟದ ಪರಿಹಾರಕ್ಕೆ ಶಿವನಿಗೇ ಮರೆಹೊಗಬೇಕೆಂದು ನಿಶ್ಚಯಿಸಿ ದೇವತೆಗಳು ಶಿವನನ್ನು ಪ್ರಾರ್ಥಿಸಿದ್ದು—

ಚೂ|| ಓಂಕಾರಸರಸಿಯೊಳು ಹೊಳೆವ ಕಮಲ, ನೀನು-ಓಂಕಾರಕುಸುಮದೊಳಗಿಹ ಪರಿಮಳ, ನೋಡ-ಲೋಂಕಾರರೂಪನಹ ನೀನೆ ಸಕಲ, ಮತ್ತೆ-ಓಂಕಾರವಾಚ್ಯ ನಿನ್ನಿರವದಚಲ, ಎಣಿಸ-ಲೋಂಕಾರವಾರಿಧಿಗೆ ನೀನೆ ಸುಜಲ, ಅರಿಯ-ಲೋಂಕಾರವೃಕ್ಷದೊಳಗುತ್ತಮಫಲ, ವಿಮಲಾ | ನವಲಿಂಗಮಯ

ನಾಗಿ ಶೋಭಿಸುವನೆ, ನವಕೋಟಿಗಣಪೂಜ್ಯನಾಗಿರುವನೆ, ನವನೀತಮೃದುಲ ಮನನೆಸಿಸಿರುವನೆ, ನರಲೋಕತಮವನ್ನು ಕಳೆಯುವವನೆ, ನಯನಾಗ್ನಿಯಿಂ ಸ್ಮರನ ಸುಟ್ಟಿರುವನೆ, ಶಿವನೆ, ಭವನೆ। ತಿಳಿಯಲರಿಯೆವು ನಿನ್ನ ನಿಜವ, ಕ್ಷಮಿಸು-ತಿಳಿಯದಿರ್ಪೆಮ್ಮ ಪಾತಕವ, ಒಲಿದು-ತಳೆ ನೀನು ಸೂಕ್ಷ್ಮವಹ ತನುವ, ಮನದಿ ನಲಿದು ಹಿಡಿವೆವು ನಿನ್ನ ಪದವ, ಸ್ತುತಿಸಿ-ಸುಲಭದಲಿ ಪಡೆಯುವೆವು ಮುದವ ॥

ಆಗ ಆಕಾಶವಾಣಿಯಾದದ್ದೇನೆಂದರೆ—

ಶ್ಲೋ॥ ಏತಲ್ಲಿಂಗಂ ಸಂವೃಣುಷ್ವ ಪೂಜನಾಯ ಜನಾರ್ದನ, । ಪಿಂಡೀಭೂತ್ವಾ ಮಹಾಬಾಹೋ ರಕ್ಷಸ್ವ ಸಚರಾಚರಮ್ ॥ —(ಸ್ಕಾಂ. ಪು)

ಅ॥ ವಿಷ್ಣುವೇ, ನೀನು ಪಾಣಿವಟ್ಟನಾಗಿ ಪೂಜೆಗೆ ತಕ್ಕ ಸಗುಣರೂಪವನ್ನು ವಹಿಸೆಂದು ಈ ಲಿಂಗವನ್ನು ಬೇಡಿ ಈ ಚರಾಚರಪ್ರಪಂಚವನ್ನು ಕಾಪಾಡು.

ವಿಷ್ಣು ಆ ಪ್ರಕಾರ ಪಾಣಿವಟ್ಟವಾಗಿ ಪ್ರಾರ್ಥನೆ ಮಾಡುತ್ತಲೆ ಜ್ವಾಲಾಲಿಂಗವು ತನ್ನ ವ್ಯಾಪಿತ್ವವನ್ನು ಸಂಕುಚಿತವಾಗಿ ಮಾಡಿಕೊಂಡು ಪೂಜಾಯೋಗ್ಯವಾದೊಂದು ಲಿಂಗವಾಯಿತು. ಆ ದಿನವು ಯಾವದೆಂದರೆ—

ಶ್ಲೋ॥ ಮಾಘಕೃಷ್ಣಚತುರ್ದಶ್ಯಾಮಾದಿದೇವೋ ಮಹಾನಿಶಿ । ಶಿವಲಿಂಗಮಭೂತ್ತತ್ರ ಕೋಟಿಸೂರ್ಯಸಮಪ್ರಭಮ್ ॥ —(ವ್ರ. ಚೂ)

ಅ॥ ಮಾಘಕೃಷ್ಣಚತುರ್ದಶಿಯ ದಿನಸ ಆದಿದೇವನಾದ ಪರಮೇಶ್ವರನು ಮಧ್ಯರಾತ್ರಿಯಲ್ಲಿ ಕೋಟಿಸೂರ್ಯಸಮನಾದ ತೇಜಸ್ಸುಳ್ಳ ಶಿವಲಿಂಗವಾದನು.

ಆಗ ಶಿವನನ್ನು ಪೂಜಿಸಿ ಕೃತಾರ್ಥನಾದ ವಿಷ್ಣು ಆ ಪೂಜಾಸೌಲಭ್ಯದ ವಿಷಯವನ್ನು ಕುರಿತು ಎಲ್ಲರಿಗೂ ಉಪದೇಶಿಸಿದ್ದೇನೆಂದರೆ—

ಶ್ಲೋ॥ ವನ್ಯೇಷು ಯಾದೃಶೀ ಪ್ರೀತಿರ್ವರ್ತತೇ ಪರಮೇಶಿತುಃ । ಉತ್ತಮೇಷ್ವಪಿ ನಾಸ್ತ್ಯೇವ ಗ್ರಾಮಜೇಷ್ವಪಿ ತಾದೃಶೀ ॥ —(ಶಿ. ಗೀ)

ಅ॥ ಪರಮೇಶ್ವರನಿಗೆ ಕಾಡಿನಲ್ಲಿ ಹುಟ್ಟಿದ ವಸ್ತುಗಳಲ್ಲಿ ಎಷ್ಟು ಪ್ರೀತಿಯೋ ಊರುಗಳಲ್ಲಿ ಹುಟ್ಟಿದ ಉತ್ತಮವಾದುವುಗಳಲ್ಲಿ ಕೂಡ ಅಷ್ಟಿಲ್ಲ.

ಆ ವಸ್ತುಗಳಲ್ಲೆಲ್ಲ ಬಿಲ್ವದ ಮೇಲೆ ಶಿವನ ಪ್ರೀತಿ ಹೆಚ್ಚು. ಏಕೆಂದರೆ—

ಶ್ಲೋ॥ ತ್ರಿದಲಂ ತ್ರಿಗುಣಾಕಾರಂ ತ್ರಿಣೇತ್ರಂ ತ್ರಿತಯಾಯುಧಮ್ । ತ್ರಿಜನ್ಮಪಾಪಸಂಹಾರಮೇಕಬಿಲ್ವಂ ಶಿವಾರ್ಪಣಮ್ ॥ — (ಬಿ. ಅ)

ಅ॥ ಮೂರು ದಲಗಳುಳ್ಳದ್ದೂ ಮೂರು ಗುಣಗಳ ಆಕಾರವುಳ್ಳದ್ದೂ ಮೂರು ಕಣ್ಣಿನಂತಿರುವದೂ ಮೂರು ಆಯುಧವಾಗಿರುವದೂ ಆದ ಒಂದು ಬಿಲ್ವವನ್ನು ಶಿವನಿಗೆ ಅರ್ಪಿಸಿದರೆ ಮೂರು ಜನ್ಮಗಳ ಪಾಪವು ಪರಿಹಾರವಾಗುವದು.

ಶಿವನಲ್ಲಿ ಭಕ್ತಿಮಾಡುವದೆಂದರೆ ಸಾಮಾನ್ಯವಾಗಿ—

ಸೂ॥ ಪೂಜಾದಿಷ್ವನುರಾಗ ಇತಿ ಪಾರಾಶರ್ಯಃ ॥ —(ನಾ. ಭ. ಸೂ)

ಅ॥ ಪೂಜಾದಿಗಳಲ್ಲಿ ಪ್ರೀತಿಯೆಂದು ಪಾರಾಶರರ ಅಭಿಪ್ರಾಯ.

ಆ ಪೂಜೆಯನ್ನು ಮಾಡುವಾಗ ಇರಬೇಕಾದ ಭಾವನೆಯೇನೆಂದರೆ—

ಕಲ್ಯಾಣಿ—ಅಟತಾಳ

ಶಿವಪೂಜೆಯ ಮಾಡಿರೊ | ಶಿವಭಕ್ತರೆಲ್ಲಾ | ಶಿವಪೂಜೆಯ ಮಾಡಿರೊ ॥ ಪ ॥ ನಾನಾಬ್ರಹ್ಮಾಂಡ ಉದಯಸ್ಥಿತಿಪ್ರಲಯಕ್ಕೆ | ತಾನೇ ಕಾರಣವಾಗಿಹ ಬ್ರಹ್ಮವು | ತಾನಾಗಿ ತನಗನ್ಯವೇನೂ ತೋರದೆ ಶಿವ | ತಾನೆಂಬ ಭಾವನೆ ತನಗೆ ಸಾಧನವೆಂದು ॥ ೧ ॥ ಎಚ್ಚರ ಮರವೆಯಳಿದು ಪರಬ್ರಹ್ಮವೆ | ಸ್ವಚ್ಛಯ ತಾನೆಂಬ ಅರಿವಿನೊಳು ॥ ಒಚ್ಚಿತ್ತನಾಗಿ ಅರ್ಪಿಸಿ ಆವಾಹನಗಳ | ಎಚ್ಚರಡಗಿ ಮೌನಾ ಕಾರದರುಹಿನೊಳ್ ॥ ೨ ॥ ಅರಿದುದ ಮರೆಯದೆ ತೊರೆಯದೆ ಲಕ್ಷ್ಯವ ತುರಿಯಾ ತೀತ ಅಹಂಬ್ರಹ್ಮವೆಂದು ॥ ಅರಿದುದ ಒರಿ ಅರಿವಿನ ಚಿದ್ರೂಪವೆ | ನೆಲೆಗೊಂಡ ಶ್ರೀ ಗುರುಸಿದ್ಧಶಾಂತನಾಗಿ ॥ ೩ ॥ —(ದಾ)

ಈ ದಿನ ಜಾಗರಣೆ ಬಹಳ ಅವಶ್ಯಕವೆಂಬುದಕ್ಕೆ ಒಬ್ಬ ಕವಿ ಚಮತ್ಕಾರನಾಗಿ ಹೇಳಿರುವದೇನೆಂದರೆ—

ಶ್ಲೋ॥ ರಾತ್ರಿಃ ಶಿವಾ ಕಾಚನ ಸನ್ನಿಧತ್ತೇ | ವಿಲೋಚನೇ ಜಾಗ್ರತ ಮಪ್ರಮತ್ತೇ ॥ ಸಮಾನಧರ್ಮಾ ಯುವಯೋಃ ಸಕಾಶೇ | ಸಖಾ ಭವಿಷ್ಯತ್ಯ ಚಿರೇಣ ಕಶ್ಚಿತ್ ॥ —(ಸು)

ಅ॥ ಎಲೇ ಕಣ್ಣುಗಳೇ, ಒಂದು ಮಂಗಲಕರವಾದ ರಾತ್ರಿ ಬರುತ್ತದೆ. ನೀವು ರೆಪ್ಪೆ ಬಡಿಯದೆ ಎಚ್ಚರವಾಗಿರಿ. ನಿಮ್ಮ ಹತ್ತಿರಕ್ಕೆ ನಿಮ್ಮಂಥವನಿನ್ನೊಬ್ಬನು ಬಂದು ಸೇರಿ ಗೆಳೆಯನಾಗುತ್ತಾನೆ. (ಎಂದರೆ ಮೂರನೇ ಕಣ್ಣು ಬರುತ್ತದೆ. ನೀವೆಲ್ಲರೂ ಶಿವನೇ ಆಗುತ್ತೀರಿ- ಎಂದರ್ಥ.)

ಈ ಜಾಗರಣೆಗೆ ಸಾಧನವಾಗಿ—

ಶ್ಲೋ॥ ರಾತ್ರೌ ಜಾಗರಣಂ ಯಸ್ಮಾತ್ತಸ್ಮಾತ್ತಾಂ ಸಮುಪೋಷಯೇತ್ ॥ —(ವ್ರ. ಚೂ)

ಅ॥ ರಾತ್ರಿಯಲ್ಲಿ ಎಚ್ಚರವಾಗಿರಬೇಕಾದ್ದರಿಂದ ಹಗಲು ಹೊತ್ತು ಊಟಮಾಡಬಾರದು.

ಹೀಗೆಂದ ಮೇಲೆ ಇಂಥದ್ದೊಂದು ವ್ರತದ ಉಪದೇಶವು ತಮಗೆ ಆದದ್ದಕ್ಕೆ ಸಂತೋಷಿಸಿ ದೇವತೆಗಳಲ್ಲಿ ಪ್ರತಿಯೊಬ್ಬರೂ ಪರಮೇಶ್ವರನಿಗೆ ಹರಸಿಕೊಂಡದ್ದು—

ಶ್ಲೋ॥ ಕರೋಮಿ ತ್ವತ್ಪೂಜಾಂ ; ಸಪದಿ ಸುಖದೋ ಮೇ ಭವ ವಿಭೋ ;| ವಿಧಿತ್ವಂ ವಿಷ್ಣುತ್ವಂ ದಿಶಸಿ ಖಲು ತಸ್ಯಾಃ ಫಲಮಿತಿ ॥ ಪುನಶ್ಚ ತ್ವಾಂ ದ್ರಷ್ಟುಂ ದಿವಿ ಭುವಿ ವಹನ್ಪಕ್ಷಿಮೃಗತಾಮ್ | ಅದೃಷ್ಟ್ವಾ ತತ್ಖೇದಂ ಕಥಮಿಹ ಸಹೇ ? ಶಂಕರ, ವಿಭೋ ॥ —(ಶಿ ಲ)

ಅ॥ ಹೆ, ಸ್ವಾಮಿ, ಶಂಕರ, ನಿನ್ನ ಪೂಜೆಯನ್ನು ಮಾಡುತ್ತೇನೆ. ನನಗೆ ಬೇಗ ಮೋಕ್ಷವನ್ನು ಕೊಡು. ಹಾಗಲ್ಲದೆ ನೀನು ಬ್ರಹ್ಮತ್ವವನ್ನೊ ವಿಷ್ಣುತ್ವವನ್ನೊ ಕೊಡುವವನಾದರೆ ಮತ್ತೆ ನಿನ್ನನ್ನು ನೋಡುವದಕ್ಕಾಗಿ ಹಕ್ಕಿಯಾಗಿ ಆಕಾಶದಲ್ಲಿಯೂ ಮೃಗವಾಗಿ ಭೂಮಿಯ ಮೇಲೆಯೂ ಸುತ್ತಿ ನಿನ್ನನ್ನು ಕಾಣದೆ ಆ ವ್ಯಥೆಯನ್ನು ಹೇಗೆ ಸಹಿಸಲಿ?

ಇನ್ನೂ ಉತ್ತಮವಾದ ಬಗೆಯ ಶಿವರಾತ್ರಿ ಯಾವದೆಂದರೆ–

ಕೀ ॥ ಕರಣಗಳೀರೈದುಂ ನಾಲ್ಕಂತಃ । ಕರಣದೊಡನೆ ಹದಿನಾಲ್ಕಾಗಿ ॥ ಹರಗರ್ಪಣೆಯಾಗಲ್ಕೆ ಚತುರ್ದಶಿ । ಧರೆಗುತ್ತಮವಹುದೊಪ್ಪಾಗಿ ॥

ಮತ್ತು–

ಭಾ ॥ ಮನದ ಕಲ್ಪವ ನೀಗಿ, ದೃಶ್ಯವ । ಕನಸಿನಂತಿರೆ ಕಂಡು, ಜ್ಞಾನದ । ಮರೆಯ ಹೊಕ್ಕರೆ ಕೃಷ್ಣಪಕ್ಷವೆ ತಾನೆಯೆನಿಸುವದು ; ॥ ಘನಕೆ ಘನವಾದಾತ್ಮಲಿಂಗದ । ನೆನಹಿನೊಳು ಮನ ಮಗ್ನವಾಗಲು । ವನಜಲೋಚನ, ಕೇಳು ಅದೆ ಶಿವರಾತ್ರಿಯೆನಿಸುವದು ॥ —(ಶಿ ಕ)

ಇಷ್ಟಾದರೆ ಅವನು ಸಂಸಾರದಲ್ಲಿದ್ದರೂ ಇಲ್ಲದಂತಾಗುವನೆಂದು ಜ್ಞಾನಿಗಳು ಹೇಳಿರುವದೇನೆಂದರೆ–

ನಾದನಾಮಕ್ರಿಯೆ–ಝಂಪೆ

ಶಿವಯೋಗಿ ಸಕಲಸಂಸಾರದೊಳಗಿದ್ದೊಡೇ । ನವನೇಕಿಯಂತೆ ಮೋಹಿಸಿ ಕೆಡುವದುಂಟೇ ? ॥ ಪ ॥ ಪಸಿಯ ಕಾಯ್ವ ಲವಣವುಂಬಂತೆ ಲೋಕಭ್ರಮೆಯೊ । ಳೊಸೆದು ತನ್ಮಯವಾದ ಮೂಢನಂತಿರದೆ ॥ ಕೆಸರಿನೊಳಗಾಡುತಿಹ ಕುಂಬಾರ ಹುಳುವಿನಂ । ತೆಸೆದು ಲೌಕಿಕವ ಸೋಂಕಿಯು ಸೋಂಕದಿರುವ ॥ ೧ ॥ ಜಲಮಗ್ನ ವಸ್ತ್ರದಂತಶಿವಾವಲಂಬನಗ । ಳೊಳಗೆ ಸಮರಸವಾದ ಬದ್ಧನಂತಿರದೆ ॥ ನಳಿನದೆಲೆ ಜಲದಿ ಮುಳುಗಿದ್ದು ನೆನೆಯದ ತೆರದಿ । ತಿಳಿದು ಸಂಸೃತಿಯನೊಂದಿಯು ಹೊಂದದಿರುವ ॥ ೨ ॥ ಇಂದ್ರಜಾಲಕ್ಕೊಲಿವನಂತೀ ಪ್ರಪಂಚ ನಿಜ । ವೆಂದು ನಂಬಿರುವ ಚಿರಜೀವಿಯಂತಿರದೆ ॥ ಇಂದ್ರಜಾಲವ ತೋರ್ಪನಂತಖಿಲವಿದು ಮಿಥ್ಯೆ । ಯೆಂದರಿದು ಗುರುಸಿದ್ಧನಡಿಯನೆಡೆವಿಡದೆ ॥ ೩ ॥ —(ಕೈ. ಕ)

ಟಿ॥ (ವಸ್ತ್ರದಂತೆ+)ಅಶಿವಾವಲಂಬನಗಳೊಳಗೆ-ಅಮಂಗಲಕರವಾದ ಲೌಕಿಕೋದ್ಯೋಗದಲ್ಲಿ.

ಶಿವಭಕ್ತಿಯ ಈ ಮಹಿಮೆಯನ್ನರಿತೇ ಕೀರ್ತನಾರಂಭದಲ್ಲಿ ಭಾಗವತೋತ್ತಮರು 'ಶಿವನ ಪೂಜಿಸೋ' ಎಂದು ಮೊದಲಾಗಿ ಉಪದೇಶ ಮಾಡಿರುವರು.

## ಭಜನಾವಲಿ

೧. ಸಾಂಬ ಸದಾಶಿವ ಸಾಂಬ ಸದಾಶಿವ । ಸಾಂಬ ಸದಾಶಿವ ಸಾಂಬ ಶಿವ

೨ ಸಾಂಬ ಸದಾಶಿವ ಶಂಭೋ ಶಂಕರ । ಶರಣಂ ಮೇ ತವ ಚರಣಯುಗಮ್

೩. ಶಂಭೋ ಶಂಕರ ಗೌರೀಶ । ಶಾಂತ ದಯಾಪರ ವಿಶ್ವೇಶ

೪. ಸಾಂಬ ಸದಾಶಿವ ಗಿರಿಜಾನಾಯಕ।ಮೃತ್ಯುಂಜಯ ಜಯ ಭವಭಯಹಾರಕ

೫. ಜಯ ಜಯ ಸಾಂಬ ; ಶಿವ ಹರ ಸಾಂಬ

೬. ಹರ ಹರ ಶಂಭೋ ಗೌರೀಪತೇ । ಚಿತ್ಸುಖದಾಯಕ ಜಗತ್ಪತೇ

ಆ ಪೂಜೆಯನ್ನು ಮಾಡುವಾಗ ಇರಬೇಕಾದ ಭಾವನೆಯೇನೆಂದರೆ—

ಕಲ್ಯಾಣಿ—ಅಟತಾಳ

ಶಿವಪೂಜೆಯ ಮಾಡಿರೊ । ಶಿವಭಕ್ತರೆಲ್ಲಾ । ಶಿವಪೂಜೆಯ ಮಾಡಿರೊ ॥ ಪ ॥ ನಾನಾಬ್ರಹ್ಮಾಂಡ ಉದಯಸ್ಥಿತಿಪ್ರಲಯಕ್ಕೆ । ತಾನೇ ಕಾರಣವಾಗಿಹ ಬ್ರಹ್ಮವು । ತಾನಾಗಿ ತನಗನ್ಯವೇನೂ ತೋರದೆ ಶಿವ । ತಾನೆಂಬ ಭಾವನೆ ತನಗೆ ಸಾಧನವೆಂದು ॥ ೧ ॥ ಎಚ್ಚರ ಮರವೆಯಳಿದು ಪರಬ್ರಹ್ಮವೆ । ನಿಶ್ಚಯ ತಾನೆಂಬ ಅರಿವಿನೊಳು ॥ ಒಚ್ಚಿತ್ತನಾಗಿ ಅರ್ಪಿಸಿ ಆವಾಹನಗಳ । ಎಚ್ಚರಡಗಿ ಮೌನಾ ಕಾರದರುಹಿನೊಳ್ ॥ ೨ ॥ ಅರಿದುದ ಮರೆಯದೆ ತೊರೆಯದೆ ಲಕ್ಷ್ಯವ ತುರಿಯಾ ತೀತ ಅಹಂಬ್ರಹ್ಮವೆಂದು ॥ ಅರಿದುದ ಬರಿ ಅರಿವಿನ ಚಿದ್ರೂಪವೆ । ನೆಲೆಗೊಂಡ ಶ್ರೀ ಗುರುಸಿದ್ಧಶಾಂತನಾಗಿ ॥ ೩ ॥ —(ದಾ)

ಈ ದಿನ ಜಾಗರಣೆ ಬಹಳ ಅವಶ್ಯಕವೆಂಬುದಕ್ಕೆ ಒಬ್ಬ ಕವಿ ಚಮತ್ಕಾರನಾಗಿ ಹೇಳಿರುವ ದೇನೆಂದರೆ—

ಶ್ಲೋ॥ ರಾತ್ರಿಃ ಶಿವಾ ಕಾಚನ ಸನ್ನಿಧತ್ತೇ । ವಿಲೋಚನೇ ಜಾಗ್ರುತ ಮಪ್ರಮತ್ತೇ ॥ ಸಮಾನಧರ್ಮಾ ಯುವಯೋಃ ಸಕಾಶೇ । ಸಖಾ ಭವಿಷ್ಯತ್ಯ ಚಿರೇಣ ಕಶ್ಚಿತ್ ॥ —(ಸು)

ಅ॥ ಎಲೇ ಕಣ್ಣುಗಳೇ, ಒಂದು ಮಂಗಲಕರವಾದ ರಾತ್ರೆ ಬರುತ್ತದೆ. ನೀವು ರೆಪ್ಪೆ ಬಡಿ ಯದೆ ಎಚ್ಚರವಾಗಿರಿ. ನಿಮ್ಮ ಹತ್ತಿರಕ್ಕೆ ನಿಮ್ಮಂಥವನಿನ್ನೊಬ್ಬನು ಬಂದು ಸೇರಿ ಗೆಳೆಯನಾಗುತ್ತಾನೆ. (ಎಂದರೆ ಮೂರನೇ ಕಣ್ಣು ಬರುತ್ತದೆ. ನೀವೆಲ್ಲರೂ ಶಿವನೇ ಆಗುತ್ತೀರಿ- ಎಂದರ್ಥ.)

ಈ ಜಾಗರಣೆಗೆ ಸಾಧನವಾಗಿ—

ಶ್ಲೋ॥ ರಾತ್ರೌ ಜಾಗರಣಂ ಯಸ್ಮಾತ್ತಸ್ಮಾತ್ತಾಂ ಸಮುಪೋಷ ಯೇತ್ ॥ —(ವ್ರ. ಚೂ)

ಅ॥ ರಾತ್ರೆಯಲ್ಲಿ ಎಚ್ಚರವಾಗಿರಬೇಕಾದ್ದರಿಂದ ಹಗಲು ಹೊತ್ತು ಊಟಮಾಡಬಾರದು.

ಹೀಗೆಂದ ಮೇಲೆ ಇಂಥದ್ದೊಂದು ವ್ರತದ ಉಪದೇಶವು ತಮಗೆ ಆದದ್ದಕ್ಕೆ ಸಂತೋಷಿಸಿ ದೇವತೆಗಳಲ್ಲಿ ಪ್ರತಿಯೊಬ್ಬರೂ ಪರಮೇಶ್ವರನಿಗೆ ಹರಸಿಕೊಂಡದ್ದು—

ಶ್ಲೋ॥ ಕರೋಮಿ ತ್ವತ್ಪೂಜಾಂ; ಸಪದಿ ಸುಖದೋ ಮೇ ಭವ ವಿಭೋ;। ವಿಧಿತ್ವಂ ವಿಷ್ಣುತ್ವಂ ದಿಶಸಿ ಖಲು ತಸ್ಯಾಃ ಫಲಮಿತಿ ॥ ಪುನಶ್ಚ ತ್ವಾಂ ದ್ರಷ್ಟುಂ ದಿವಿ ಭುವಿ ವಹನ್ಪಕ್ಷಿಮೃಗತಾಮ್ । ಅದೃಷ್ಟ್ವಾ ತತ್ಖೇದಂ ಕಥಮಿಹ ಸಹೇ ? ಶಂಕರ, ವಿಭೋ ॥ —(ಶಿ ಲ)

ಅ॥ ಹೆ, ಸ್ವಾಮಿ, ಶಂಕರ, ನಿನ್ನ ಪೂಜೆಯನ್ನು ಮಾಡುತ್ತೇನೆ. ನನಗೆ ಬೇಗ ಮೋಕ್ಷ ವನ್ನು ಕೊಡು. ಹಾಗಲ್ಲದೆ ನೀನು ಬ್ರಹ್ಮತ್ವವನ್ನೊ ವಿಷ್ಣುತ್ವವನ್ನೊ ಕೊಡುವವನಾದರೆ ಮತ್ತೆ ನಿನ್ನನ್ನು ನೋಡುವದಕ್ಕಾಗಿ ಹಕ್ಕಿಯಾಗಿ ಆಕಾಶದಲ್ಲಿಯೂ ಮೃಗವಾಗಿ ಭೂಮಿಯ ಮೇಲೆಯೂ ಸುತ್ತಿ ನಿನ್ನನ್ನು ಕಾಣದೆ ಆ ವ್ಯಥೆಯನ್ನು ಹೇಗೆ ಸಹಿಸಲಿ?

ಇನ್ನು ಉತ್ತಮವಾದ ಬಗೆಯ ಶಿವರಾತ್ರಿ ಯಾವದೆಂದರೆ–

ಕೀ ॥ ಕರಣಗಳೀರೈದುಂ ನಾಲ್ಕಂತಃ । ಕರಣದೊಡನೆ ಹದಿನಾಲ್ಕಾಗಿ ॥ ಹರಿಗರ್ಪಣೆಯಾಗಲ್ಕೆ ಚತುರ್ದಶಿ । ಧರೆಗುತ್ತಮವೆನಿಸುದೊಪ್ಪಾಗಿ ॥

ಮತ್ತು–

ಭಾ ॥ ಮನದ ಕಲ್ಪವ ನೀಗಿ, ದೃಶ್ಯವ । ಕನಸಿನಂತಿರೆ ಕಂಡು, ಜ್ಞಾನದ । ಮರೆಯ ಹೊಕ್ಕರೆ ಕೃಷ್ಣಪಕ್ಷವೆ ತಾನೆಯೆನಿಸುವದು ; ॥ ಘನಕೆ ಘನವಾದಾತ್ಮಲಿಂಗದ । ನೆನಹಿನೊಳು ಮನ ಮಗ್ನವಾಗಲು । ವನಜಲೋಚನ, ಕೇಳು ಅದೆ ಶಿವರಾತ್ರಿಯೆನಿಸುವದು ॥ —(೩ ಕ)

ಇಷ್ಟಾದರೆ ಅವನು ಸಂಸಾರದಲ್ಲಿದ್ದರೂ ಇಲ್ಲದಂತಾಗುವನೆಂದು ಜ್ಞಾನಿಗಳು ಹೇಳಿರುವದೇನೆಂದರೆ–

ನಾದನಾಮಕ್ರಿಯೆ–ಝಂಪೆ

ಶಿವಯೋಗಿ ಸಕಲಸಂಸಾರದೊಳಗಿರ್ದಡೇ । ಸವಿವೇಕಿಯಂತೆ ಮೋಹಿಸಿ ಕೆಡುವದುಂಟೇ? ॥ ಪ ॥ ಪಸಿಯ ಕಾಯ್ಗಳ್ಗವಣಮುಂಬಂತೆ ಲೋಕಭ್ರಮೆಯೊ । ಳೊಸೆದು ತನ್ಮಯವಾದ ಮೂಢನಂತಿರದೆ ॥ ಕೆಸರಿನೊಳಗಾಡುತಿಹ ಕುಂಬಾರಹುಳುವಿನಂ । ತೆಸೆದು ಲೌಕಿಕವ ಸೋಂಕಿಯು ಸೋಂಕದಿರುವ ॥ ೧ ॥ ಜಲಮಗ್ನವಸ್ತ್ರದಂತಶಿವಾವಲಂಬನಗ । ಳೊಳಗೆ ಸಮರಸವಾದ ಬದ್ಧನಂತಿರದೆ ॥ ನಳಿನದೆಲೆ ಜಲದಿ ಮುಳುಗಿರ್ದು ನೆನೆಯದ ತೆರದಿ । ತಿಳಿದು ಸಂಸೃತಿಯನೊಂದಿಯು ಹೊಂದದಿರುವ ॥ ೨ ॥ ಇಂದ್ರಜಾಲಕ್ಕೊಲಿವನಂತೀ ಪ್ರಪಂಚ ನಿಜ । ವೆಂದು ನಂಬಿರುವ ಚಿರಜೀವಿಯಂತಿರದೆ ॥ ಇಂದ್ರಜಾಲವ ತೋರ್ಪನಂತಖಿಲವಿದು ಮಿಥ್ಯೆ । ಯೆಂದರಿದು ಗುರುಸಿದ್ಧನಡಿಯನೆಡೆಬಿಡದೆ ॥ ೩ ॥ —(ಕೈ. ಕ)

ಟಿ ॥ (ವಸ್ತ್ರದಂತೆ+)ಅಶಿವಾವಲಂಬನಗಳೊಳಗೆ-ಅಮಂಗಲಕರವಾದ ಲೌಕಿಕೋದ್ಯೋಗದಲ್ಲಿ.

ಶಿವಭಕ್ತಿಯ ಈ ಮಹಿಮೆಯನ್ನರಿತೇ ಕೀರ್ತನಾರಂಭದಲ್ಲಿ ಭಾಗವತೋತ್ತಮರು 'ಶಿವನ ಪೂಜಿಸೋ' ಎಂದು ಮೊದಲಾಗಿ ಉಪದೇಶ ಮಾಡಿರುವರು.

## ಭಜನಾವಲಿ

೧. ಸಾಂಬ ಸದಾಶಿವ ಸಾಂಬ ಸದಾಶಿವ । ಸಾಂಬ ಸದಾಶಿವ ಸಾಂಬ ಶಿವ
೨ ಸಾಂಬ ಸದಾಶಿವ ಶಂಭೋ ಶಂಕರ । ಶರಣಂ ಮೇ ತವ ಚರಣಯುಗಮ್
೩. ಶಂಭೋ ಶಂಕರ ಗೌರೀಶ । ಶಾಂತ ದಯಾಪರ ವಿಶ್ವೇಶ
೪. ಸಾಂಬ ಸದಾಶಿವ ಗಿರಿಜಾನಾಯಕ।ಮೃತ್ಯುಂಜಯ ಜಯ ಭವಭಯಹಾರಕ
೫. ಜಯ ಜಯ ಸಾಂಬ ; ಶಿವ ಹರ ಸಾಂಬ
೬. ಹರ ಹರ ಶಂಭೋ ಗೌರೀಪತೇ । ಚಿತ್ಸುಖದಾಯಕ ಜಗತ್ಪತೇ

# ಸುಕನ್ಯಾಖ್ಯಾನ

## ಪೀಠಿಕೆ—ಪಾತಿವ್ರತ್ಯ

ಯರಕುಲಕಾಂಬೋದಿ - ಅಟತಾಳ

ಪತಿಭಕ್ತಿಗೆಣೆಯಿಲ್ಲ ಜಗದಿ | ಪತಿ | ವ್ರತೆಯರ ಗುಣ ಸುಖಪೀವುದು ಮುದದಿ || ಪ || ಧನವಂತನಲ್ಲೆಂದು ಬಿಡದೆ | ಬಹು | ಗುಣವಂತನೆಂದು ಕೈ ಹಿಡಿದರೆ ಮುಗುಡೆ || ಎಣಿಸದೆ ರೂಪನ ಮುಸದೆ | ಇವರ್ಗ | ವನಿತೆಯ ಕೀರ್ತಿ ಹಬ್ಬದೆ ತಾ ನಿಲ್ಲುವದೆ? || ೧ ||

ಜಗತ್ತಿನಲ್ಲಿ ನಮಗೆ ಇಂದ್ರಿಯಗಳಿರುವದರಿಂದಲ್ಲವೆ ವಿಷಯಸುಖವನ್ನನುಭವಿಸುವದು? ಆದ್ದರಿಂದ ಆ ಇಂದ್ರಿಯಗಳನ್ನು ನಮಗೆ ದಯಪಾಲಿಸಿರುವ ಪರಮಾತ್ಮನ ಮೇಲೆ ಭಕ್ತಿಯನ್ನು ಮಾಡಿದರೆ ಮಾತ್ರ ನಾವು ಧನ್ಯರಾಗುವೆವಲ್ಲವೆ? ಅದಕ್ಕೆ ತಕ್ಕ ಸಾಧನವನ್ನು ಬಿಟ್ಟು ನಮ್ಮೆಲ್ಲರ ಸ್ಥಿತಿಯು ಹೇಗಿರುವದೆಂಬುದನ್ನು ಒಬ್ಬರು ಭಗವದ್ಭಕ್ತರು ವ್ಯಕ್ತಗೊಳಿಸಿರುವದೇನೆಂದರೆ—

ವೃ|| ಒರಗಿರ್ದಂ ಕನಸಿಂದೆ ದುಃಖಸುಖದೊಳ್ಬಾಳ್ದಂತೆ ತಾನೇಳ್ದು ಕ | ಣ್ದೆರೆದಾಗಳ್ಬಯಲಪ್ಪವೊಲ್ ನರಕತಿರ್ಯಙ್ಮರ್ತ್ಯದೇವತ್ವದೊಳ್ || ತಿರತಂದೊಪ್ಪುವ ಬಾಳ್ಕೆಯಿಾ ಬಯಲ ಬಾಳಂ ನಚ್ಚಿ ನಿತ್ಯತ್ವಮಂ | ಮರವಂತೇಕೆಯೊ ನಿಮ್ಮನಾಂ ಮರೆವೆನೋ? ರತ್ನಾಕರಾಧೀಶ್ವರಾ || —(ರ. ಶ)

ಈ ಪ್ರಯತ್ನವನ್ನು ಕೊನೆಗಾಲದಲ್ಲಿ ಮಾಡಿದ ಮಾತ್ರಕ್ಕೇ ಸಾಲದಾಗುವದೆಂದು ನೀತಿಶಾಸ್ತ್ರಕಾರರು ಎಚ್ಚರಿಸುವದೇನೆಂದರೆ—

ಕಂ|| ಒಡಲಿದು ದಿಡಮಿರ್ಪನ್ನಂ, | ಕಡುಜವದಿಂ ಮಿಳ್ತು ಸನಿಹಕ್ಕೈತರದನ್ನಂ, || ಬಿಡದಾತ್ಮಹಿತವನೆಸವುದು; | ಕಡೆಗಾಲದೊಳೇನನೆಸಗಲಾರ್ಪಂ ಮನುಜಂ? || —(ನ. ಶ)

ಹೀಗಿದ್ದರೂ ಎಲ್ಲರೂ ಈ ದಾರಿಯನ್ನೆ ಬಿಟ್ಟು ಅಡ್ಡದಾರಿಯನ್ನು ಹಿಡಿದಿರುವದನ್ನು ಒಬ್ಬ ಭಗವದ್ಭಕ್ತರು ಹೇಳಿರುವದೇನೆಂದರೆ—

ಮುಖಾರಿ — ಝಂಪೆ

ಸಕಲಸಾಧನವೆನಗೆ ಕೈಸೇರಿತು; ||ಪ|| ಮುಕುತಿಯಾ ಸಾಧನಕೆ ಬಾರದಾ ಧನವು || ಅ. ಪ. || ಸಂಸಾರದಲಿ ಜ್ಞಾನ; ಸತಿಪುತ್ರರಲಿ ಭಕ್ತಿ; | ಕಂಸಾರಿ ಪೂಜೆಯಲಿ ವೈರಾಗ್ಯವು; || ಸಂಶಯದ ಜನರಲ್ಲಿ ಸಖತನವ ಮಾಡುವೆನು; | ಹಿಂಸೆಪಡಿಸುವೆ ಸುಜನಸಂಗವನು ರಂಗ || ೧ || ವಿಷಯಂಗಳಲಿ ಧ್ಯಾನ; ಲೌಕೀಕದಲಿ ಮನವು; | ವಶವಲ್ಲದಾ ಕಥೆಗಳೇ ಶ್ರವಣವು; || ಹಸನಾಗಿ ಎಣಿಸುವಾ ಹಣಹೊನ್ನಿನಾ ಜಪವು; | ಬಿಸಿಲೊಳಗೆ ಚರಿಸುವದೆ ಅದೆ ಮಹಾತಪವು || ೨ || ಪೀಠಪೂಜೆಂಬುವದು ಲಾಜಚೊರಣವಯ್ಯ; | ಮಾಟದ ಪಯೋ

ಧರವೆ ಕಲಶಪೂಜೆ; || ಚೂಟಿಯುಲಿ ಉದರದಾ ಯಾತ್ರೆಯೆ ಮಹಾಯಾತ್ರೆ;| ಬೂಟಕತನದಿ ಅನೃತ ಪೇಳ್ವುದೇ ಮಂತ್ರ || ೩ || ಹೆಂಡತಿಯು ಕೊಂಡೆಯುದ ಮಾತುಗಳೆ ಉಪದೇಶ ; | ಚಂಡಕೋಪವು ಎಂಬುದಗ್ನಿಹೋತ್ರ; || ಪಂಡಿತ ನೆನಿಸಿದೆ ಕುವಿದ್ಯದ ಪಠನೆಯಿಂದ ; | ಕಂಡಲ್ಲಿ ವಾದಿಸುವೆ ತರ್ಕವಯ್ಯ; || ೪ || ಓದಿದೆನು ಯಲ್ಲಣ್ಣ ಕಲ್ಲಣ್ಣ ಎನ್ನುತಲಿ ; | ಸ್ವಾಧ್ಯಾಯವೆಂಬುದೇ ಪಗಡೆ ಪಂಚಿ ; || ಸಾಧಿಸಿ ಈ ಪರಿಯ ಧನವನ್ನು ಕೂಡ್ಹಾಕಿ | ವೋದಿ ಶ್ರೀ ಹಯವದನ ನಿನ್ನ ನಾ ಮರೆತೆ || ೫ || —(ದಾ)

ದೇವತೋಪಾಸನೆಯು ಪುರುಷರಂತೆ ಸ್ತ್ರೀಯರಿಗೆ ಕಷ್ಟವೆಂದರೆ ಅವರಿಗೆ ಸುಖವಾದ ಬೇರೆ ಮಾರ್ಗವಿರುವದು. ಅದು ಯಾವದೆಂದರೆ—

ಶ್ಲೋ|| ನಾಸ್ತಿ ಯಜ್ಞಃ ಸ್ತ್ರಿಯಃ ಕಿಂಚಿನ್ನ ವ್ರತಂ ನೋಪವಾಸಕಮ್ ;| ಯಾ ತು ಭರ್ತರಿ ಶುಶ್ರೂಷಾ ತಯಾ ಸ್ವರ್ಗಂ ಜಯತ್ಯಸೌ || —(ಸು)

ಅ|| ಹೆಂಗಸರಿಗೆ ಯಾವದೊಂದು ಯಜ್ಞವೂ ವ್ರತವೂ ಉಪವಾಸವೂ ಇಲ್ಲ. ಗಂಡನನ್ನು ಸೇವಿಸುವದರಿಂದಲೇ ಅವರು ಸ್ವರ್ಗವನ್ನು ಗೆಲ್ಲುವರು.

ಇದೇ ಅಭಿಪ್ರಾಯವನ್ನು ದೊಡ್ಡವರು ಹೇಳಿರುವದೇನೆಂದರೆ—

ಶ್ಲೋ|| ಭರ್ತಾ ತು ಖಲು ನಾರೀಣಾಂ ಗುಣವಾನ್ನಿರ್ಗುಣೋಽಪಿ ವಾ | ಧರ್ಮಂ ವಿಮೃಶಮಾನಾನಾಂ ಪ್ರತ್ಯಕ್ಷಂ ದೇವಿ, ದೈವತಮ್ || —(ಶ್ರೀ. ರಾ)

ಅ|| ಧರ್ಮವನ್ನು ಒಳಹೊಕ್ಕು ನೋಡುವವರಿಗೆ ಗುಣವಂತನಾಗಲಿ ಗುಣಹೀನನಾಗಲಿ ಹೆಂಗಸರಿಗೆ ಗಂಡನೇ ಪ್ರತ್ಯಕ್ಷ ದೈವವು.

ಆ ಪತಿಸೇವೆಯ ರೀತಿಯನ್ನು ಕುರಿತು ಒಬ್ಬರು ಹೇಳಿರುವದೇನೆಂದರೆ—

ಭಾ|| ಪತಿಯ ಮಾನಸದಿರವನನುಸರಿ | ಸುತೆ, ನಿರಾಕರಿಸದೆ ತದಾಜ್ಞೆಯ, | ಹಿತವಚನಗಳನಾಡುತುದ್ಧತತನವ ತೋರಿಸದೆ, || ಪತಿಯ ತಪ್ಪೆಣಿಸದೆ, ನಿರಂತರ | ಪತಿಯ ಶಿಶ್ರೂಷೆಯನು ಮಾಡು | ತ್ತತಿಶಯದ ಸದ್ವೃತ್ತಿಗಳನಾಚರಿಸು ಕುವರಿ || —(ಸ್ತ್ರೀ. ಧ. ಸಂ)

ಇದೇ ವಿಷಯದಲ್ಲಿ ಒಬ್ಬ ಸ್ತ್ರೀಶಿರೋಮಣಿಯು ಹೇಳಿರುವದೇನೆಂದರೆ—

ಸಾಂ|| ಮುದುಪರರಿಯರೆಂದು ಮುಂದುಗೆಟ್ಟಾಡದೆ, | ಚದುರರಲ್ಲೆಂದು ಜರಿಯದೆ || ಇದು ಹಿತವೆಂದವರಿತ್ತುಪದೇಶವ | ನೆರ್ದೆಗೊಳಿಸುವುದೆಸಗುವುದು || —(ಹ. ಧ)

ಈ ಅಭಿಪ್ರಾಯವನ್ನು ಲಕ್ಷ್ಯದಲ್ಲಿಟ್ಟುಕೊಂಡೇ ಕೀರ್ತನಾರಂಭದಲ್ಲಿ ಭಗವದ್ಭಕ್ತರು "ಪತಿಭಕ್ತಿಗೆಣೆಯಿಲ್ಲ ಜಗದಿ" ಎಂದು ಮೊದಲಾಗಿ ಉಪದೇಶ ಮಾಡಿರುವರು. ಇದಕ್ಕೆ ನಿದರ್ಶನವಾಗಿ ಸುಕನ್ಯಾಖ್ಯಾನವು ನಿರೂಪಣಮಾಡಲಾಗುವದು.

---

## ಆಖ್ಯಾನ

ಕೀ॥ ಭೃಗುಸುತ ಚ್ಯವನನು ವೀರಾಸನದೊಳು—ಮಿಗಿಲಹ ತಪದೊಳು ಕುಳಿತು । ಬಗೆಯುದೆ ಹುತ್ತುಗಟ್ಟಿರುಪದ ದೇಹದಿ— ಬಿಗಿದಿರ್ದನು ಜಗವನು ಮರೆತು ॥

ಹೀಗಿರುವಾಗ—

ಸಾ ॥ ಬಂದನಾಗ ಶರ್ಯಾತಿನೃಪನು ಬಹು । ಸುಂದರಾಂಗಿಯರ ಕೂಡಿ ॥ ನಂದನಸಮುಪಹ ತಪೋವನಕೆ ತಾ । ಸಂದಡಪಿಯೊಳೋಡಾಡಿ ॥

ಅವನ ಮಗಳಾದ ಸುಕನ್ಯೆಯು ತನ್ನ ಗೆಳತಿಯರನ್ನೆಲ್ಲ ಹಿಂದೆ ಬಿಟ್ಟು ಒಂಟಿಯಾಗಿ ಹಾಡುತ್ತ ಬರುತ್ತಿರುವದು—

ಕಾಂಬೋದಿ—ಝಂಪೆ

ಸರಿ ಯಾರು ಲೋಕದೊಳು ನಿನಗೆಲೆ ವಸಂತ? ॥ ಪ ॥ ಹರುಷವನು ಧರೆಗೀಯುವದೆ ನಿನ್ನ ಪಂಥ ॥ ಅಪ ॥ ಮಾಮರದ ಮೇಲುಗಡೆಯೊಳು ಸ್ವೇಚ್ಛೆಯಿಂ ಕುಳಿತು । ಕೋಮಲದ ಕಂಠದಿಂ ಕೋಗಿಲೆಗಳು ॥ ಸಾಮಗಾನವನು ಪಾಡಿಸಿ ನಿನ್ನ ಕೀರ್ತಿಯನು । ಪ್ರೇಮದಿಂದಲಿ ಹಾಡುತಿಹುದ ನೋಡಿದರೆ ॥ ೧ ॥ ಸರಸಿಗಳೊಳೆಲ್ಲೆಲ್ಲಿಯುಂ ತುಂಬಿ ತೋರುತ್ತ । ಅರಳಿರುವ ಕಮಲದೆಸಳುಗಳಿಂದಲಿ ॥ ಪರಿಮಳವ ಕೊಂಡೊಯ್ವ ಗಾಳಿಯೊಂದಿಗೆ ದುಂಬಿ । ಮೊರೆದು ಸಾರುವ ನಿನ್ನ ಯಶವ ಕೇಳೆ ॥ ೨ ॥ ಎಲ್ಲೆಲ್ಲಿ ನೋಡೆ ಪೆಣ್ಚಕ್ರವಾಕಂಗಳಾ । ಸಲ್ಲಲಿತಕಮಲನಾಳದೊಳರ್ಧವ ॥ ಮೆಲ್ಲುತ್ತ ತಾನು ಮೊದಲುಳಿದರ್ಧವನು ತನ್ನ । ನಲ್ಲಗಾ ಮೇಲೆ ಕೊಡುತಿಹುದ ನೋಡೆ ॥ ೩ ॥

ಆ ಸ್ವರಮಾಧುರ್ಯದಿಂದ ಬಹಿರ್ಮುಖನಾದ ಚ್ಯವನನು ಸುಕನ್ಯೆಯನ್ನು ನೋಡಿ ಮೋಹಿಸಿ ತನ್ನ ಕುಗ್ಗಿದ ಕಂಠದಿಂದ ಹೇಳಿದ್ದು—

ಮೋಹನ—ಆದಿತಾಳ

ನೆರೆ ನೋಡೆನ್ನ ಮರುಕದಿ ಮುನ್ನ । ಸ್ತ್ರೀರತ್ನವೆನೀ ॥ ಪ ॥ ನೆರೆ ನೋಡು ತೆನ್ನೊಳು । ವಿರಚಿಸು ಹರ್ಷವ । ಸೆರಗೊಡ್ಡಿ ಬೇಡುವೆ । ಸ್ಮರಸರಣಿ ನಿನ್ನ ॥ ಅಪ ॥ ಕಳೆದೆ ನೀನೆನ್ನಯ । ಬಲಿದ ಸಮಾಧಿಯು । ಕಳೆಯ ಬೇಡೆನ್ನೊಳು । ಚಲಿಸುವ ಪ್ರಾಣಗಳ ॥ ಉಳಿಸೆನ್ನ ಜೀವಿತವ । ಗಳಿಲನೆ ನಿನ್ನಯ । ಒಲುಮೆಯ ತೋರುತ । ಜಲಜಾತಸಮನೇತ್ರೆ ॥ ೧ ॥ ನೀನೇ ನನಗೆ ಈಗ । ಕಾಣುವ ದೈವತವು । ನೀನೇ ನನಗೆ ಈ । ಕ್ಷೋಣಿಯ ಸರ್ವಸ್ವವು ॥ ನೀನೇ ನನಗೆ ಪಂಚ । ಪ್ರಾಣವು ನೋಡಲು । ನೀನಿಂದು ದಯದೋರೆ । ಮಾನಿನಿಮಣಿ ಈಗ ॥ ೨ ॥ ಶರಣು ಬಂದಿಹೆ ನಿನಗೆ । ತರುಣೀಮಣೀಯೆ ನೀನು ಕರುಣವ ದೋರದಿರೆ । ಮರಣವಾಗುವದು ॥ ತಿರುಗಿ ನೋಡೆನ್ನನು । ಕೊರಗಿಸದಿನ್ನು ಮೇಲೆ । ಬೆರಗಾಗಿ ಬೇಡುವೆ । ಸರಸಿರುಹಾನನೇ ೩ ॥

ಇಂಥ ಋಷಿಗಳಿಗೆ ಕೂಡ ವಿಷಯಸುಖದ ಮೇಲೆ ಬಾಯಿನೀರುಂಟಾಗುವದನ್ನು ನೋಡಿಯೇ ನೀತಿಶಾಸ್ತ್ರಕಾರರು ಹೇಳಿರುವದೇನೆಂದರೆ—

ಶ್ಲೋ॥ ವಿಶ್ವಾಮಿತ್ರಪರಾಶರಪ್ರಭೃತಯೋ ವಾತಾಂಬುಪರ್ಣಾಶನಾ । ಸ್ತೇಽಪಿ ಸ್ತ್ರೀಮುಖಪಂಕಜಂ ಸುಲಲಿತಂ ದೃಷ್ಟ್ವೈವ ಮೋಹಂಗತಾಃ ; ॥ ಶಾಲ್ಯನ್ನಂ, ಸಘೃತಂ, ಪಯೋದಧಿಯುತಂ, ಯೇ ಭುಂಜತೇ ಮಾನವಾ। ಸ್ತೇಷಾ ಮಿಂದ್ರಿಯನಿಗ್ರಹೋ ಯದಿ ಭವೇದ್ವಿಂಧ್ಯಃ ಪ್ಲವೇತ್ಸಾಗರೇ ॥ —(ಸು)

ಅ॥ ಗಾಳಿ, ನೀರು, ತರಗೆಲೆ—ಮೊದಲಾದುವುಗಳನ್ನು ತಿಂದುಕೊಂಡಿದ್ದಂಥ ವಿಶ್ವಾಮಿತ್ರ ಪರಾಶರ—ಮೊದಲಾದವರೇ ಹೆಂಗಸರ ಸುಂದರವಾದ ಮುಖವನ್ನು ನೋಡಿಯೇ ಮೋಹಗೊಂಡರು; ಇನ್ನು ನೆಲ್ಲಕ್ಕಿಯ ಅನ್ನ, ತುಪ್ಪ, ಹಾಲು, ಮೊಸರು—ಇವುಗಳನ್ನುಣ್ಣುವಂಥ ಮನುಷ್ಯರಿಗೆ ಇಂದ್ರಿಯನಿಗ್ರಹವಾಗುವದೆಂದರೆ ವಿಂಧ್ಯಪರ್ವತವು ಸಮುದ್ರದಲ್ಲಿ ತೇಲೀತು.

ಮೈಮೇಲೆಲ್ಲ ಹುತ್ತಗಟ್ಟಿದ್ದ ಚ್ಯವನನು ಕಾಣಿಸದೆ ಇದ್ದದ್ದರಿಂದ ಸುತ್ತಲೂ ಬೆರಗಾಗಿ ನೋಡಿದ ಸುಕನ್ಯೆಯು ಆ ಹುತ್ತವನ್ನು ನೋಡಿ—

ದಿಂ॥ ಹುತ್ತವೋ ಮೇಣಾತ್ತಂ ಸಣ್ಣ ಗಿರಿಯೊ? ನೋಡೆ ; । ಎತ್ತ ನೋಡಿ ದೊಡಂ ರಮ್ಯವಿಹುದು ನಾಡೆ ; ॥ ಇತ್ತ ನೋಡಲ್ಕೇಣೆರಡು ಹೊಳೆವ ಗೂಡು ;। ಚಿತ್ರಕಾಶ್ಚರ್ಯಂ ನೋಡಲಿದರ ಪಾಡು ॥

ಸುಕನ್ಯೆಯು ಆ ಹುತ್ತದ ಗೂಡುಗಳನ್ನು ಪರೀಕ್ಷಿಸಲಿಚ್ಛಿಸಿದಾಗ ನಡೆದದ್ದೇನೆಂದರೆ—

ಭಾ॥ ಅಚ್ಚರಿಯನಿನ್ನೊಂದ ಕೇಳಾ । ಸಚ್ಚರಿತಸಿರೆ ಹುತ್ತಿನೊಳಗುರಿ । ಗಿಚ್ಚಿನಂತೋರಂತೆ ಬೆಳಗುವ ಕಂಗಳನು ಕಂಡು ॥ ಅಚ್ಚರಿಯಿದೇನೆನುತ ಮುಳ್ಳಿಲಿ । ಚುಚ್ಚಿದಳು ತಾನರಿಯದವಳಿಂ । ತೊಚ್ಚತಿಳಿದುದು ರಕ್ತವವನಿಗೆ ಕಾಂತೆ ಬೆರಗಾಗೆ ॥ —(ಕ. ಭಾಗ)

ಟಿ॥ ಓರಂತೆ—ಎಡೆಬಿಡದೆ. ಒಚ್ಚತ (ಇಳಿದುದು)—ಹೆಚ್ಚಾಗಿ.

ಇದರ ಪ್ರಭಾವದಿಂದ—

ಸಾಂ॥ ಸೈನಿಕರಿಗೆ ಮಲಮೂತ್ರಬಂಧನೆಯಾಗೆ । ಮಾನವೇಂದ್ರನು ಚಿಂತೆಗೊಂಡು ॥ ತಾನೆ ವಿಚಾರಿಸಿ ತಿಳಿದನು ಮಗಳಿಂದ । ಜ್ಞಾನಿಗೆ ಪೀಡೆಯಾದುದನು ॥

ಒಡನೆ ಶರ್ಯಾತಿರಾಜನು ಮುನಿಯ ಬಳಿಗೆ ಬಂದು ತನ್ನ ಮಗಳದು ತಪ್ಪಾಯಿತೆಂದು ಪೇಚಾಡಿಕೊಂಡದ್ದನ್ನು ನೋಡಿ ಮುನಿಯು ಅವನ ಸಮಾಧಾನಕ್ಕಾಗಿ ಹೇಳಿದ್ದು—

### ಭೂಪಾಳಿ—ಝಂಪೆ

ಬರಲುಳ್ಳ ದುಃಖವನು ಮೀರಲಾರಿಂದಹುದು? ಮರುಳೆ, ನಿಯಮಿಸುವ ವಿಧಿ ಬೇರಿರುತಿರೆ ॥ ಪ ॥ ಹರಿಯು ಭೃಗುಸತಿಯ ಕೊಲಬೇಕೆನ್ನುತಿರ್ದನೇ? । ಹರನ ವಿಧಿ ಧಿಕ್ಕರಿಪೆನೆಂದಿರ್ದನೇ? ॥ ಸ್ಮರನು ಮೋಶನ ಶರವನೆಸುವೆನೆಂದಿರ್ದನೇ?। ಸುರರು ಯಜ್ಞಕೆ ಪೋಪೆವೆಂದಿರ್ದರೇ? ॥ ೧ ॥ ರಾಕ್ಷಸರ ಗುರು ದಾನಕಡ್ಡ

ಬರಲಿರ್ದನೆ ? | ದಕ್ಷನಂ ಶಶಿಯುಪೇಕ್ಷಿಸಲಿರ್ದನೇ ? || ಅಕ್ಷಗಳ ಶಲ್ಯರಿಪುವಾಡ
ಲೆಂದಿರ್ದನೇ ? |ದಕ್ಷಸುಗ್ರನ ವೈರಕೊಲಿದಿರ್ದನೇ ? || ೨ || ಮುನಿಗಳಿಂ ನಹುಷ
ನಂದಣವೊರಿಸಲಿರ್ದನೇ? | ಕನಕಮೃಗವನು ರಾಮನೆಳಸಿರ್ದನೇ? || ಮುನಿಯ
ಧೇನುವ ಕಾರ್ತವೀರ್ಯನರಿದಿರ್ದನೇ? | ದನುಜನವನಿಜೆಗಳುಪಲೆಂದಿರ್ದನೇ? || ೩ ||
ಈಶನ ಜಲಂಧರಂಗೆಲ್ಲೈದಲಿರ್ದನೇ? | ವಾಸವನಹಲ್ಯೆಯನು ಬಯಸಿರ್ದನೇ? ||
ವಾಸುದೇವನಸುತರು ಯತಿಯ ಗೆಲಲಿರ್ದರೇ ? | ವ್ಯಾಸನಭವನ ಜರಿವೆನೆಂದಿ
ರ್ದನೇ ? || ೪ ||ತುರಗವನು ಶೂದ್ರೀಕನೇರಲೆಂದಿರ್ದನೇ?| ತುರಗಮೇಧವ ಸಗರ
ನೆಣಿಸಿರ್ದನೇ? || ಹಿರಿಯರಿಂತವರೆ ಮುಂದೋಚದೊಳಗಾದರೆನೆ | ಗುರುಸಿದ್ಧ
ನಾಜ್ಞೆಯನು ಸೀಸುಳಿವೆಯ ? || ೫ || —(ಕೈ. ಕ)

ಆದರೂ ಪ್ರಾಯಶ್ಚಿತ್ತವನ್ನು ಹೇಳಿ ತಮ್ಮ ಪಾಪವನ್ನು ಕಳೆಯಬೇಕೆನ್ನಲು ಮುನಿ ಹೇಳಿದ್ದು—

ಭಾ|| ಎನ್ನ ಜಪತಪನಿತ್ಯಕರ್ಮಕೆ | ಬನ್ನವಿಲ್ಲದ ತೆರದಿ ಗುಣಸಂ| ಪನ್ನೆ
ನಿನ್ನಯ ಕನ್ಯೆ ಶಿಶ್ರೂಷಿಸಲು ಸತಿಯಾಗಿ || ಸನ್ನಿಯಿಂದೆನಗಿತ್ತು ಮದುವೆಯ |
ಮನ್ನೆಸಗು ಸುಖವಹುದು ; ಕುಡದೊಡೆ | ಮನ್ನಿಸಲು ತಾನಾರೆನೆಂದನು
ಚ್ಯವನನಮುನಿಯಾಗ || —(ಸು. ಚ)

ಹೀಗೆನ್ನುತ್ತಲೇ ರಾಜಕುಮಾರನನ್ನು ಕೈಹಿಡಿಯುವದಕ್ಕೆ ಯೋಗ್ಯಳಾದ ಮಗಳನ್ನು ವನವಾಸಿಯ ಕೈಯಲ್ಲಿಟ್ಟರೆ ಅವಳ ಮನಸ್ಸಿನ ಮಡಿ ಮಾಸೀತೆಂದು ಅರಸನು ಮನಸ್ಸಿನಲ್ಲಿ ಯೋಚಿಸಿದ್ದು—

ಚೌ|| ಗೌತಮನ ಕೈ ಹಿಡಿದವಳು ಪುರು-ಹೂತನಿಗೆ ಮರುಳಾದಳು ;|
ಪ್ರೀತಿಸುತ ಚಂದ್ರನನು ತಾರೆಯು-ಪಾತಕಾಬ್ಧಿಯೊಳಾಳ್ದಳು ;|| ಈ ತೆರದೊಳಿವ
ಳಾಗಲೆಂತಾ-ರೀತಿಯನು ನಾ ಸಹಿಪೆನು ; | ಭೀತಿದೋರ್ಪುದು ಮುನಿಗೆ
ನೀಡುವೊ-ಡೀ ತರುಣಿಯರ ಮಣಿಯನು ||

ಹೀಗೆ ತಂದೆ ಯೋಚಿಸುತ್ತಿರುವಾಗ ಮಗಳು ಬಂದು ತಾನು ಆ ಋಷಿಯನ್ನೇ ವರಿಸುತ್ತೇನೆಂದು ಹೇಳುತ್ತಾಳೆ—

ಶ್ಲೋ|| ಆತ್ಮಾರ್ಥಂ ಜೀವಲೋಕೇSಸ್ಮಿನ್ಕೋ ನ ಜೀವತಿ ಮಾನವಃ ? |
ಪರಂ ಪರೋಪಕಾರಾರ್ಥಂ ಯೋ ಜೀವತಿ ಸ ಜೀವತಿ || —(ಸು)

ಅ|| ಜಗತ್ತಿನಲ್ಲಿ ಯಾರು ತಾನೆ ತನ್ನ ಪ್ರಯೋಜನಕ್ಕಾಗಿ ಬದುಕುವುದಿಲ್ಲ? ಪರೋಪಕಾರಕ್ಕಾಗಿ ಯಾರು ಬದುಕುತ್ತಾರೊ ಅವರ ಬದುಕೇ ಬದುಕು.

ಆದ್ದರಿಂದ ತಾನು ಸೈನಿಕರ ಹಿತಕ್ಕಾಗಿ ಮುನಿಯನ್ನು ವರಿಸುವಂತೆ ನಿಶ್ಚಯಿಸಿ ಈ ಸಂದರ್ಭಕ್ಕೆ ತಕ್ಕ ಹಿರಿಯರುಕ್ತಿಯನ್ನು ನೆನೆಸಿಕೊಂಡದ್ದು—

ಸೌರಾಷ್ಟ್ರ—ಛಾಪು

ಮಾಡು ಧಾನಧರ್ಮ ಪರಉಪಕಾರವ ಮರೆಯದಿರೆಚ್ಚರಿಕೆ | ಕೇಡ ನೆನೆಯ
ಬೇಡ ನಂಬಿದವರ ಮೇಲೆ ಕೆಡುವೆ ನೀನೆಚ್ಚರಿಕೆ || ಪ || ಬಾಳಿ ಬದುಕಿ ಸೇರಿ

ಇರುವಾಗಲೆ ಬಂಧುಬಳಗಗಳೆಚ್ಚರಿಕೆ । ಹಾಳು ಸಂಸಾರಕ್ಕೆ ಹಲವರ ಹತ ಗೈದು ಬದುಕದಿರೆಚ್ಚರಿಕೆ ॥ ೧ ॥ ಚೆನ್ನಾಗಿ ಬದುಕಿದೆ ನಾನು ಬದುಕಿದೆಂಬೊ ಚೇಷ್ಟೆ ಬೇಡೆಚ್ಚರಿಕೆ । ಮುನ್ನ ಮಾಡಿದ ಪುಣ್ಯಫಲದಿಂದ ಬಂದದ್ದು ಮುಂದೆ ನೋಡೆಚ್ಚರಿಕೆ ॥ ೨ ॥ ಹೊನ್ನು ಹೆಣ್ಣು ಮಣ್ಣು ನಿನ್ನಣಕಿಸಿ ಹೋದುದಿನ್ನು ನೋಡೆಚ್ಚರಿಕೆ । ಇನ್ನು ನಂಬಬೇಡ ನಿನಗೆ ಮೃತ್ಯುವು ಕಂಡ್ಯ ತಿಳಿದಿರು ಎಚ್ಚರಿಕೆ ॥ ೩ ॥ ಬಲ್ಲಿದ ನೀನೆಂದು ಬಡವರ ಬಾಯ್ಮೇಲೆ ಬಡಿಯದಿರೆಚ್ಚರಿಕೆ ॥ ಎಳ್ಳಷ್ಟು ತಪ್ಪದೆ ಯಮನಾಳುಗಳು ನರಕಕ್ಕೆಳೆದೊಯ್ವರೆಚ್ಚರಿಕೆ ॥ ೪ ॥ ಕಾಲನ ದೂತರು ಯಾವಾಗ ಎಳೆವರೊ ಕಾಣದು ಎಚ್ಚರಿಕೆ । ಬೇಲೂರಪುರವಾಸ ನೆಲೆಯಾದಿ ಕೇಶವನ ಮರೆಯದಿರೆಚ್ಚರಿಕೆ ॥ ೫ ॥ —(ದಾ)

ಮತ್ತು ತಾನು ರಾಜವೈಭವವನ್ನು ಮುಖ್ಯವೆಂದೆಣಿಸುವವಳಲ್ಲವೆಂಬುದನ್ನು ಅವಳು ತನ್ನ ಮಾತಿನಲ್ಲಿ ಸೂಚಿಸಿದ್ದೇನೆಂದರೆ—

ತ್ರಿ॥ ಹಣಗುಣದಿ ಬಲವುಳ್ಳ ರಣಧೀರ ರಾವಣನ । ತೃಣವೆಂದು ಬಗೆದ ಪತಿವ್ರತೆಸೀತೆಗೆ । ಎಣೆಯಾರು? ಹೇಳು ಸರ್ವಜ್ಞ ॥ —(ಸ.ಪ)

ಹೀಗೆ ತಾನು ಪಾತಿವ್ರತ್ಯಪ್ರಭಾವದಲ್ಲಿ ಮುಂದಾಗಬೇಕೆಂದು ಆ ಋಷಿಯನ್ನು ಕೈ ಹಿಡಿದು ಅವಳು—

ಭಾ॥ ವನಿತೆಯುಳಿದಾ ರಾಜಭೋಗವ, । ಮುನಿಸತಿಯರಂಡದೊಳು ವಲ್ಕಲ । ವನು ಧರಿಸಿ, ದಿನದಿನದೆ ಮಿಾವಳು ಶೀತಜಲದಲ್ಲಿ; ॥ ವಿನಯದಿಂ ಪತಿಯಾಣ ವಿಸಿದಂ । ತನುಗೊಳಿಸಿ ತಂದೀವಳಾತಗೆ । ಘನತರದಕುಸುಮವನು ಸಮಿಧೆಯು ದರ್ಭಪತ್ರಗಳ ॥ —(ಸು. ಚ)

ಟಿ॥ ಆಣವಿಸಿದಂತೆ—ಅಪ್ಪಣೆ ಮಾಡಿದಂತೆ.

ಆಗ ಸಂತುಷ್ಟನಾದ ಶರ್ಯಾತಿಯು ತನ್ನ ಮಗಳಿಗೆ ಬುದ್ಧಿವಾದವನ್ನು ಹೇಳಿದ್ದು—

ವೃ॥ ಮನಮುರಿದಂಜಿ ಬೆರ್ಚಿ ಬೆಸಕೆಯ್; ನಿಜವಲ್ಲಭನೇನನೆಂದೊಡಂ । ಕಿನಿಸದಿರೊಂದಿದಗ್ರಮಹಿಷೀಪದದಲ್ಲಿ ಪದಸ್ಥೆಯಾಗು; ನಂ । ದನರನಗಣ್ಯಪುಣ್ಯಧನರಂ ಪಡೆಯೆಂದಮರ್ದಪ್ಪಿಕೊಂಡು ತ । ತ್ತನುಜೆಯಗಲ್ಕೆಯೊಳ್ ನೆಗಪಿದರ್ ಬಸಮಲ್ಲದ ಬಾಷ್ಪವಾರಿಯಂ ॥ —(ಆ. ಪು)

ಆ ತಂದೆಯು ತಾನು ಹೊರಡುವಾಗ ತನ್ನ ಅಳಿಯನಿಗೂ ಹೇಳಿದ್ದೇನೆಂದರೆ—

ವೃ॥ ಬಗೆದುಂ ನಿನ್ನಸ್ವಾಯೋನ್ನತಿಯನಿವಳತಿಸ್ನೇಹಸಂಬಂಧಮಂ ನೀಂ । ಬಗೆದುಂ ಸಂದೆಮ್ಮ ನಣ್ಪಂ, ಬಗೆದುಮರಿಯದೇನಾನುಮೊಂದಾಗಳುಂ ಮೆ ॥ ಲ್ಲಗೆ ನೀಂ ಕಲ್ಪಿಪ್ಪುದೆಮ್ಮಂ ನೆನೆದೆರ್ದೆಗಿಡದಂತಾಗೆ ಪಾಲಿಪ್ಪುದಿಂತೀ । ಮೃಗಶಾಬೇಕ್ಷಾಕ್ಷಿಯಂ ಮನ್ನಿಸುವುದಿನಿತನಾಂ ಬೇಡಿದೆಂ ವಜ್ರಜಂಘಾ ॥ —(ಆ. ಪು)

ಟಿ॥ ನಣ್ಪಂ—ನಂಟತನವನ್ನು.

ಶರ್ಯಾತಿಯು ತನ್ನ ಪುರಕ್ಕೆ ಹಿಂದಿರುಗಿದ ಮೇಲೆ ಒಂದು ದಿನ ಚ್ಯವನದಂಪತಿಗಳ ಮನೆಗೆ ಅಶ್ವಿನೀದೇವತೆಗಳು ಬರಲು ಅವರನ್ನು ಸತ್ಕರಿಸಿ ಮುದುಕನಾದ ಚ್ಯವನನು ವರವನ್ನು ಕೇಳಿದ್ದು—

ಶ್ಲೋ|| ಗ್ರಹಂ ಗ್ರಹೀಷ್ಯೇ ಸೋಮಸ್ಯ ಯಜ್ಞೇ ವಾಮಪ್ಯಸೋಮಪೋಃ; । ಕ್ರಿಯತಾಂ ಮೇ ವಯೋರೂಪಂ ಪ್ರಮದಾನಾಂ ಯದೀಪ್ಸಿತಮ್ ||
—(ಸಂ. ಭಾಗ)

ಅ|| ಯಜ್ಞದಲ್ಲಿ ಸೋಮಪಾನಕ್ಕೆ ಅರ್ಹರಲ್ಲವೆಂದಾಗಿರುವ ನಿಮಗೆ ಸೋಮಪಾನವನ್ನು ಮಾಡಿಸುತ್ತೇನೆ. ಸ್ತ್ರೀಯರು ಮೋಹಿಸುವಂಥ ವಯಸ್ಸನ್ನೂ ರೂಪವನ್ನೂ ನನಗೆ ಉಂಟುಮಾಡಿ.

ಅದಕ್ಕೆ ಸಮ್ಮತಿಸಿ ಸುಕನ್ಯೆಯ ಮುಂದೆಯೇ ಅಶ್ವಿನೀದೇವತೆಗಳಿಬ್ಬರೂ ಚ್ಯವನನೊಡನೆ ಕೂಡಿ ಒಂದು ಸರೋವರದಲ್ಲಿ ಮುಳುಗಿ ಮೇಲಕ್ಕೇಳುವಾಗ—

ಶ್ಲೋ|| ಪುರುಷಾಸ್ತ್ರಯ ಉತ್ತಸ್ಥುರಪೀಚ್ಯಾ ವನಿತಾಪ್ರಿಯಾಃ । ಪದ್ಮಸ್ರಜಃ ಕುಂಡಲಿನಸ್ತುಲ್ಯರೂಪಾಃ ಸುವಾಸಸಃ || —(ಸಂ. ಭಾಗ)

ಅ|| ಸುಂದರರಾಗಿ, ಹೆಂಗಸರನ್ನು ಮೋಹಗೊಳಿಸುವವರಾಗಿ, ಕಮಲದ ಮಾಲೆಗಳುಳ್ಳವರಾಗಿ, ಕುಂಡಲಗಳುಳ್ಳವರಾಗಿ, ಸಮಾನವಾದ ರೂಪುಳ್ಳವರಾಗಿ, ಉತ್ಕೃಷ್ಟವಾದ ವಸ್ತ್ರಗಳನ್ನು ಧರಿಸಿದಂಥ ಮೂವರು ಪುರುಷರು ಎದ್ದರು.

ಆ ಮೂವರೂ ತಮ್ಮಲ್ಲಿ ಯಾರನ್ನಾದರೂ ವರಿಸೆನ್ನಲು ಸುಕನ್ಯೆಯು ತನಗೆ ತನ್ನ ಪತಿಯೇ ದೊರೆಯುವಂತೆ ಅಶ್ವಿನೀದೇವತೆಗಳನ್ನೇ ಪ್ರಾರ್ಥಿಸಿದ್ದು—

ಕಲ್ಯಾಣಿ—ಆದಿತಾಳ

ಕಾಯಬೇಕು ನೀವೆನ್ನನು । ಈಯುತೆಸಗೆ ಸಾಧನ ॥ ಪ ॥ ಪತಿವ್ರತೆಯಾದೆನ್ನ । ಹಿತವನು ಮಾಡದೆ || ಅತಿಯಾಗಿ ವಂಚಿಪುದು । ಕ್ಷಿತಿಗೆಂತು ಯುಕ್ತವು । || ೧ || ಮೋಸವೆಂದೆಂದಿಗು । ಲೇಸನು ಮಾಡದು; || ದೋಷವಲ್ಲವೆ? ಇದು । ಗಾಸಿಗೊಳಿಸುವದು || ೨ || ಪಾಪದ ಬುದ್ಧಿಯು । ರೂಪಿಪುದುಚಿತವೆ? ॥ ತಾಪಗೊಳಿಸುವರೆ? । ಈ ಪರಿಯೊಳು ನೀವು || ೩ ||

ಹೀಗೆನ್ನುತ್ತಲೆ ಅಶ್ವಿನೀಕುಮಾರರು ತಮ್ಮ ಸ್ವಸ್ವರೂಪವನ್ನು ಧಾರಣೆಮಾಡಿ ತಮ್ಮಲ್ಲಿ ತಾವು ಎಚ್ಚತ್ತುಕೊಂಡದ್ದೇನೆಂದರೆ—

ಶ್ಲೋ|| ಪರದಾರರತಿಃ, ಫಲಾಭಿಸಂಧಿ । ರ್ಬಹುದಂಭೋ, ಭಗಕಾಮನಾ, ಮಮತ್ವಮ್, || ಚರಿತಂ ಮುಹುರೀದೃಗಸ್ಮದೀಯಂ । ಕಥಮಪವರ್ಗರಸಸ್ಯ ಭಾಜನಂ ಸ್ಮಃ? || —(ಸು. ಲಾ)

ಅ|| (೧) ಪರಸ್ತ್ರೀಯರ ಮೇಲೆ ಆಸೆ, ಪ್ರತಿಫಲದ ಮೇಲೆ ಬಯಕೆ, ಬಹಳವಾದ ಆಡಂಬರ, ವಿಷಯೇಚ್ಛೆ, ನನ್ನದೆಂಬಭಿಮಾನ,— ನಮ್ಮ ನಡೆವಳಿಕೆ ಹೀಗಿರುವಾಗ ನಾವು ಮೋಕ್ಷಕ್ಕೆ ಹೇಗೆ ಭಾಗಿಗಳಾದೇವು? (೨) ಮೇಲಿನ ದೋಷಗಳೆಲ್ಲ ಪವರ್ಗದ ಅಕ್ಷರಗಳಿಂದ ಕೂಡಿವೆ. ನಮಗೆ ಅಪವರ್ಗ (ಮೋಕ್ಷ) ಹೇಗೆ ಸಿಕ್ಕೀತು?

ಆಗ ಅವರು ಸುಕನ್ಯೆಗೆ ಮೆಚ್ಚಿ ಹೇಳಿದ್ದು—

ಕಂ|| ಕೋಗಿಲೆಗೆ ದನಿಯೆ ರೂಪಂ; | ಸೀಗದ ಹದಿಬದೆಯು ತನವೆ ವನಿತೆಗೆ ರೂಪಂ; || ಏಗಳುಮಿಳೆಯೊಳ್ಪುರುಷಂ | ಗಾಗುರುತರ ವಿದ್ಯೆ ರೂಪು; ತವಸಿಗೆ ಸಹನಂ || —(ನ. ಶ)

ಹೀಗೆ ಹೇಳಿ ಚ್ಯವನನನ್ನು ರೂಪಯೌವನಸಂಪನ್ನನನ್ನಾಗಿ ಮಾಡಿ ಅಶ್ವಿನೀದೇವತೆಗಳು ಹೋದ ಮೇಲೆ ಚ್ಯವನದಂಪತಿಗಳು ಸುಖದಿಂದಿರುವಾಗ ಒಮ್ಮೆ ಶರ್ಯಾತಿರಾಜನು ಬಂದು ಚ್ಯವನನನ್ನು ಪರಪುರುಷನೆಂದು ತಿಳಿದು ತನ್ನ ಮಗಳನ್ನು ಕುರಿತು ಹೇಳಿದ್ದು—

ಶ್ಲೋ|| ಚಿಕೀರ್ಷಿತಂ ತೇ ಕಿಮಿದಂ ಪತಿಸ್ತ್ವಯಾ | ಪ್ರಲಂಭಿತೋ ಲೋಕನಮಸ್ಕೃತೋ ಮುನಿಃ; || ತ್ವಂ ಯಜ್ಜರಾಗ್ರಸ್ತಮಸತ್ಯಸಮ್ಮತಂ | ವಿಹಾಯ ಜಾರಂ ಭಜಸೇಽಮುಮಧ್ವಗಂ || —(ಸಂ. ಭಾಗ)

ಅ|| ಹೆ, (ಅಸತಿ) ಕೆಟ್ಟಹೆಂಗುಸೆ, ಈಗ ಏನು ಮಾಡಿದೆ? ಜಗತ್ತಿಗೆಲ್ಲ ಪೂಜ್ಯನೂ ಗಂಡನೂ ಆದ ಮುನಿಯನ್ನು ಮೋಸಗೊಳಿಸಿದೆಯ? ನೀನು ಮದುವೆಯಾದವನನ್ನು ಮುದುಕನಾದ್ದರಿಂದ (ಅಸಮ್ಮತಂ) ಬೇಡದವನೆಂದು ಬಿಟ್ಟು ಈ ದಾರಿಹೋಕನನ್ನು ಆಶ್ರಯಿಸಿದ್ದಿ.

ನೀನು ಮಾಡಿದ್ದು ಅನುಚಿತವೆಂದು ಇನ್ನೂ ಹೇಳಿದ್ದು—

ಭಾ|| ಕಾತ ಕಲ್ಪದ್ರುಮವನುಳಿದೀ | ಹೂತ ಶಾಲ್ಮಲಿಗೆರಗಿದೆಯಲಾ! | ಬೂತು ಮಾಡಿದೆ ಮಗಳೆ, ಪಾವನವೆನಿಪುಭಯಕುಲವ; || ಖ್ಯಾತಿಯನು ಮಾಡಿದೆ, ಮಹಾನ್ವಯ | ಜಾತೆಯರಗಿದು ಫಲವೆ? ದುರ್ಗತಿ | ಹೇತುವಲ್ಲಾ! ತಾಯೆ, ಹೇಳಂತಸ್ಥವೇನೆಂದ || —(ಕ. ಭಾಗ)

ಟಿ|| ಕಾತ—ಕಾಯಿ ಬಿಟ್ಟ. ಹೂತ—ಹೂ ಬಿಟ್ಟಿರುವ. ಶಾಲ್ಮಲಿಗೆ—ಮುತ್ತುಗದ ಗಿಡಕ್ಕೆ.

ಅದಕ್ಕೆ ಸುಕನ್ಯೆಯ ಉತ್ತರ—

ಪೂರ್ವಿ, ಕಲ್ಯಾಣಿ—ಅಟತಾಳ

ನೋಡಿ ಮಾತನಾಡಬೇಕಣ್ಣ | ಅಪ್ಪಯ್ಯ ಕೇಳೊ | ನೋಡದೆ ಮಾತಾಡಲೇಕಣ್ಣ? || ಪ || ನೋಡಿ ಮಾತನಾಡಬೇಕು | ಆಡಿ ಮಾತ ನೋಡಬೇಕು | ಚಾಡಿಗಾರರನ್ನು ಹೊರಗೆ | ದೂಡಿ ದೂರ ಮಾಡಬೇಕು || ಅ ಪ || ಬುದ್ಧಿವಂತನೀನು ಖರೆಯಣ್ಣ | ಹಾಗಾದ ಮೇಲೆ | ಇದ್ದಹಾಗೆ ತಿಳಿಯಬೇಕಣ್ಣ || ಬುದ್ಧಿವಂತನಾದಮೇಲೆ ಇದ್ದಹಾಗೆ ತಿಳಿಯುವದಕೆ | ಸದ್ಗುರುವ ಸೇರಿ ಭವವ ಗೆದ್ದು ಮುಕ್ತನಾಗಬೇಕು || ೧ || ಗಂಡನನು ಬಿಡಲಿಲ್ಲ ಕಾಣಣ್ಣ | ಈ ಪುರುಷ ನನ್ನ | ಗಂಡನಲ್ಲದೆ ಬೇರೆಯಲ್ಲಣ್ಣ || ಗಂಡನೇ ದೊಡ್ಡವರ ಕರುಣದಿ | ಗಂಡುಗಲಿಯೆನೆ ತೋರುತಿರ್ಪನು | ಗಂಡುಗಲಿ ತಾನಾದ ಮಾತ್ರದಿ | ಗಂಡನಾಗದೆ ಬೇರೆಯಹನೆ? || ೨ || ಭಂಡೆ ನೀನೆಂದೆನಲುಬೇಡಣ್ಣ | ನೀನೀಗ ನನ್ನನು | ಪುಂಡನಿವನಲ್ಲಲ್ಲ ಕಾಣಣ್ಣ || ಭಂಡತನವನು ಪುಂಡತನವನು | ಕಂಡ ಕಡೆಯಲಿ ಚೆಂಡ

ನಾಡುವ | ಚಂಡತೇಜದ ಧರ್ಮವನೆ ಕೆಳೆ | ಗೊಂಡವರು ಕಾಣಣ್ಣ ನಾವು ॥ ೩ ॥ —(ದಾ)

ಆಮೇಲೆ, ನಡೆದ ಸಂಗತಿಯನ್ನೆಲ್ಲ ಕೇಳಿ ಸಂತೋಷಗೊಂಡ ಶರ್ಯಾತಿರಾಜನು ಒಂದು ಯಜ್ಞಕ್ಕೆ ಸಂಕಲ್ಪವನ್ನು ಮಾಡಿ ಚ್ಯವನನ ಪೌರೋಹಿತ್ಯದಿಂದ ಅದನ್ನು ಮುಗಿಸುವ ನಿಶ್ಚಯವನ್ನು ಮಾಡಿದನು. ಆ ಯಜ್ಞದಲ್ಲಿ ಚ್ಯವನನು ಇಂದ್ರಾದಿಗಳಿಗೆ ಹವಿರ್ಭಾಗವನ್ನು ಕೊಟ್ಟ ಮೇಲೆ ಸೋಮರಸದ ಪಾತ್ರೆಯನ್ನು ಹಿಡಿದು ಅಶ್ವಿನೀದೇವತೆಗಳನ್ನು ಕರೆಯಲು ಇಂದ್ರನು ಬಂದು ತಡೆದು ಹೇಳಿದ್ದು—

ಶ್ಲೋ॥ ಚಿಕಿತ್ಸಕಾನ್ ದೇವಲಕಾನ್ ಮಾಂಸವಿಕ್ರಯಿಣಸ್ತಥಾ | ವಿಪಣೇನ ಚ ಜೀವಂತೋ ವರ್ಜ್ಯಾಃ ಸ್ಯುರ್ಹವ್ಯಕವ್ಯಯೋಃ ॥ —(ಮ. ಸ್ಮೃ.)

ಅ॥ ವೈದ್ಯರು, ಪೂಜಾರಿಗಳು, ಮಾಂಸವನ್ನು ಮಾರುವವರು ಮತ್ತು ವ್ಯಾಪಾರದಿಂದ ಬದುಕುವವರು-ಇವರನ್ನು ಹವ್ಯಕವ್ಯಗಳಲ್ಲಿ ಬಿಡಬೇಕು.

ವೈದ್ಯರನ್ನೇಕೆ ಬಿಡಬೇಕೆಂದರೆ—

ಶ್ಲೋ॥ ಮಿಥ್ಯೌಷಧೈರ್ಹಂತ! ಮೃಷಾಕಷಾಯೈ | ರಸಹ್ಯಲೇಹ್ಯೈರಯಥಾರ್ಥತೈಲೈಃ ॥ ವೈದ್ಯಾ ಇಮೇ ವಂಚಿತರುಗ್ಣವರ್ಗಾಃ | ಪಿಚಂಡಭಾಂಡಂ ಪರಿಪೂರಯಂತಿ ॥ —(ಸು)

ಅ॥ ಅಯ್ಯೋ! ಈ ವೈದ್ಯರು ಸುಳ್ಳು ಮೂಲಿಕೆಗಳಿಂದಲೂ ಸುಳ್ಳು ಕಷಾಯಗಳಿಂದಲೂ ಓಕರಿಕೆಯನ್ನುಂಟುಮಾಡುವ ಲೇಹ್ಯಗಳಿಂದಲೂ ಸುಳ್ಳು ಸುಳ್ಳು ಎಣ್ಣೆಗಳಿಂದಲೂ ರೋಗಿಗಳನ್ನು ಮೋಸಗೊಳಿಸಿ ಗುಡಾಣದಂಥ ಹೊಟ್ಟೆಯನ್ನು ತುಂಬಿಕೊಳ್ಳುತ್ತಾರೆ.

ಅದಕ್ಕೆ ಚ್ಯವನನು ಹೇಳಿದ್ದು—

ಶ್ಲೋ॥ ಮಸ್ತೇ ದುಃಸಹವೇದನಾಕವಲಿತೇ, ಮಗ್ನೇ ಸ್ವರೇಽಂತರ್ಗಲಮ್, | ತಪ್ತಾಯಾಂ ಜ್ವರಪಾವಕೇನ ಚ ತನೌ, ತಾಂತೇ ಹೃಷೀಕವ್ರಜೇ, ॥ ದೂನೇ ಬಂಧುಜನೇ, ಕೃತಪ್ರಲಪನೇ ಧೈರ್ಯಂ ವಿಧಾತುಂ ಪುನಃ | ಕಃ ಶಕ್ತಃ ಕಲಿತಾಮಯಪ್ರಶಮನೋ ವೈದ್ಯಾತ್ಪರೋ ವಿದ್ಯತೇ? ॥ —(ಸು)

ಅ॥ ತಲೆಯೆಲ್ಲ ಬಹಳವಾಗಿ ನೋಯುತ್ತಲೂ ಸ್ವರವು ಕುತ್ತಿಗೆಯಲ್ಲಿಯೇ ಮೈಗರೆಯುತ್ತಲೂ ಮೈ ಎಲ್ಲ ಜ್ವರದಿಂದ ಸುಡುತ್ತಲೂ ಇಂದ್ರಿಯಗಳೆಲ್ಲ ಸೊರಗುತ್ತಲೂ ನಂಟರಿಷ್ಟರೆಲ್ಲ ಖಿನ್ನರಾಗಿ ಅಳುತ್ತಲೂ ಇರುವಾಗ ಧೈರ್ಯವನ್ನು ಕೊಡುವದಕ್ಕೆ ರೋಗವನ್ನು ಪರಿಹಾರಮಾಡಬಲ್ಲ ವೈದ್ಯರನ್ನು ಬಿಟ್ಟರೆ ಬೇರೆ ಯಾರಿದ್ದಾರೆ?

ಆಗ ಇಂದ್ರನು ಹೇಳಿದ್ದು—

ಕೀ॥ ದೂತರಶ್ವಿನೀಕುವರರೆಮಗೆ ಬರಿ | ಮಾತೇಂ? ಕೊಡದಿರು ಭಾಗವನು ;॥ ಮಾತನಿದನು ಸೀ ಮೀರಲು ವಜ್ರದಿ | ಘಾತಿಸಿ ನಿನ್ನನು ಕೊಂದಪೆನು ॥

ಎಂದು ವಜ್ರವನ್ನೆತ್ತುತ್ತಲೆ—

ಭಾ|| ಕೊಂಡನೇ ವಜ್ರವನಹಲ್ಯಾ | ಮಿಂಡನದಕೇನಾಯ್ತು; ತನ್ನ | ದ್ಧಂಡತನ ಹಾರುವನೊಳಿದೆ ನೀ ನೋಳ್ಪುದೆಂದೆನುತ || ಭಂಡ ! ಫಡ !! ಫಡ !!! ನಾವು ಕೊಟ್ಟುದ | ನುಂಡು ಬದುಕುವದಲ್ಲದೇಕೀ | ಚಂಡಿ? ಸಾಕಾಪರಿಯಲ ಲ್ಲಿಯೆ ನಿಲಲಿ ಭುಜವೆಂದ || —(ಕ. ಭಾಗ)

ಹೀಗೆಂದು ಹೂಂಕರಿಸುತ್ತಲೇ ಇಂದ್ರನ ಭುಜವು ಹಾಗೆಯೇ ನಿಂತದ್ದಲ್ಲದೆ ಮದಾಸುರನೆಂಬ ಒಂದು ಭೂತವು ಉತ್ಪತ್ತಿಯಾಗಿ ಇಂದ್ರನಿಗೆ ಮೃತ್ಯುವಾಗಿ ಕಾಣಿಸಿಕೊಂಡದ್ದು—

ರ|| ಹೊರಟಿತಾ ಹುಂಕೃತಿಯಿಂದಲಿ ಭೂತ | ಜಗಕಾಯಿತು ಘಾತ ||ಪ||
ಒಂದುದವಡೆಯಾಕಾಶವನೊತ್ತಿತು | ಒಂದು ದವಡೆ ಭೂಗೋಲವನುತ್ತಿತು |
ಕೋರೆಹಲ್ಲು ನಾಲ್ಕುಂ ಬೆಳಗುತ್ತಿರೆ | ನೂರುಂಗಾವುದದುದ್ದದಿ ತಾ ನೆರೆ |
ಎರಡು ಬಾಹುವೆರಡಬ್ರಗಳಿಂತಿರೆ | ಮೆರೆದು ಹತ್ತುಸಾಸಿರ ಗಾವುದವಿರೆ |
ಮಿಂಚಿನಂತೆ ಥಳಥಳ ಹೊಳೆಯುತ್ತಲಿ | ಚಂಚಲವಹ ನಾಲಿಗೆಯಿರೆ ಬಾಯಲಿ |
ಬಾಯಿನೋಡೆ ಕಾಲಾಗ್ನಿಯು ನೆಲೆವನೆ | ಬೇಯುತ್ತಿಹ ದೃಷ್ಟಿಗಳ ತೌರುಮನೆ ||

ಆಗ ಏನಾಯಿತೆಂದರೆ—

ಸಾ|| ಅಟ್ಟಿಕೊಂಡು ಬರೆ ಭೂತನು ಸುರಪನ | ನೆಟ್ಟನವನು ಬಲವಂದು || ಮುಟ್ಟಿದನಾ ಮುನಿಪದಗಳ ತಲೆಯಲಿ | ಬಿಟ್ಟನು ಗರ್ವವನೆಂದು ||

ಸಹಜವಾಗಿ ದಯಾಳುವಾದ ಚ್ಯವನನು ಅವನನ್ನು ಮನ್ನಿಸಿದೊಡನೆ ಆ ಮದಾಸುರನು ತನಗೇನು ಗತಿಯೆಂದಾಗ ಚ್ಯವನನು ಹೇಳಿದ್ದು—

ಸಾಂ|| ಎಲೆ ಮದದೈತ್ಯನೆ, ಜೂಜಾಡುವೆಡೆಯಲಿ | ಸಲೆ ಮದ್ಯಪಾನದೆಡೆ ಯಲಿ || ಬಲವಾದ ಬೇಟೆಯನಾಡುವೆಡೆಯೊಳು ನೀ | ನೊಲಿದಿರು ನಿನ್ನಿಚ್ಛೆ ಯಲಿ ||

ಈ ಪ್ರಕಾರ ತಮ್ಮೊಡೆಯನ ಬಿಡುಗಡೆಯಾದದ್ದೇ ಸಾಕೆಂದೆಣಿಸಿ ಆಗ ದೇವತೆಗಳೆಲ್ಲರೂ ಮುಂದೆ ಮಾಡಿದ್ದೇನೆಂದರೆ—

ಶ್ಲೋ|| ಅನ್ವಜಾನಸ್ತತಃ ಸರ್ವೇ ಗ್ರಹಂ ಸೋಮಸ್ಯಚಾಶ್ವಿನೋಃ | ಭಿಷಜಾವಿತಿ ಯತ್ಪೂರ್ವಂ ಸೋಮಾಹುತ್ಯಾ ಬಹಿಷ್ಕೃತೌ ||

ಅ|| ವೈದ್ಯರೆಂಬ ಕಾರಣದಿಂದ ಮೊದಲು ಸೋಮಪಾನಕ್ಕೆ ಹೊರಗುಮಾಡಿದ್ದಂಥ ಅಶ್ವಿನೀ ದೇವತೆಗಳಿಗೆ ಕೂಡ ಈಗ ಸೋಮರಸವನ್ನು ಕೊಡುವುದಕ್ಕೆ ಎಲ್ಲರೂ ಒಪ್ಪಿಗೆಯನ್ನು ಕೊಟ್ಟರು.

ಈ ಪ್ರಕಾರ ಯಜ್ಞವು ಸಾಂಗವಾಗಿ ಸುಕನ್ಯೆಯ ಕೀರ್ತಿಯು ಮನುಷ್ಯಲೋಕದಲ್ಲಿಯೂ ದೇವಲೋಕದಲ್ಲಿಯೂ ಕೂಡ ಕಿಕ್ಕಿರಿಯಿತು. ಇದನ್ನು ನೋಡಿಯೇ ಕೀರ್ತನಾರಂಭದಲ್ಲಿ ಭಗವದ್ಭಕ್ತರ "ಪತಿಭಕ್ತಿಗೆಣೆಯಿಲ್ಲ ಜಗದಿ" ಎಂದುಪದೇಶಮಾಡಿರುವರು.

---

# ಹರಿಶ್ಚಂದ್ರ

## ಪೀಠಿಕೆ — ಸತ್ಯ.

ಪಂತವರಾಳಿ—ಏಕತಾಳ

ಸತ್ಯವೆಂಬುದೊಂದೇ | ಜಗದೊಳು | ಸ್ತುತ್ಯಧರ್ಮವಯ್ಯಾ ॥ ಪ ॥ ಸತ್ಯವು ಸಮುಸ್ತಸದ್ಗುಣಗಳಿಗೆ | ಪಥ್ಯವೆಂದರಿತು ನೀನಡೆಯಯ್ಯ ॥ ಅ ಪ ॥ ನಿನ್ನದೆಂಬುದೆಲ್ಲ | ಹೋದರೂ | ಬನ್ನವಿಲ್ಲವಯ್ಯ; ॥ ಇನ್ನು ನೀನು ಸತ್ಯವ ಸಂರಕ್ಷಿಸೆ | ಧನ್ಯನಾಗಿಯೇ ಬಾಳುವೆಯಯ್ಯ ॥ ೧ ॥ ಕಷ್ಟವೊದಗಿದಾಗ | ನೀನದ | ನಷ್ಟು ಸಹಿಸಯ್ಯ; ॥ ನಿಷ್ಠೆಯಿಂದ ನೀ ಸತ್ಯವ ಹಿಡಿದಿರೆ | ಶ್ರೇಷ್ಠಮನುಜನೆಂದೆನಿಸುವೆಯಯ್ಯ ॥ ೨ ॥

ಜಗತ್ತಿನಲ್ಲಿ ಜನರಿಗೆ ಯಾರೂ ಹೇಳಿಕೊಡದಿದ್ದರೂ ದೇವರೊಬ್ಬನಿರುವನೆಂಬ ಮತ್ತು ತಾವು ಅವನ ಅನುಗ್ರಹಕ್ಕೆ ಪಾತ್ರರಾಗಬೇಕೆಂಬ ತಿಳಿವಳಿಕೆಯೊಂದು ಸಹಜವಾಗಿ ಇದ್ದುಬಿಟ್ಟಿರುವದು. ಆ ದೇವರ ಅನುಗ್ರಹವನ್ನು ಪಡೆಯುವದಕ್ಕೆ ಸಹಾಯವಾಗಲೆಂದು ಒಬ್ಬ ಕವಿ ಹೇಳಿರುವದೇನೆಂದರೆ—

ಭಾ॥ ಸಿರಿಗೆ ಹಿಗ್ಗದೆ, ಬಡತನಕೆ ಜ | ರ್ಝರಿತನಾಗದೆ, ಪರರು ಕೀರ್ತಿಸೆ | ಬೆರೆತಿರದೆ, ನಿಂದಿಸಿದವರನುರೆ ಮರಳಿ ನಿಂದಿಸದೆ, ॥ ಹಿರಿಯರಲಿ ಗರ್ವಿಸದೆ, ತನುವನು | ಪಿರಿದು ವಿಶ್ವಾಸಿಸದೆ, ಸತ್ಯವ | ತೊರೆಯದಿಹ ಸತ್ಪುರುಷನೆನ್ನವನಾತ ಕೇಳೆಂದ ॥ —(ಅ. ಚ)

ಮೇಲೆ ಹೇಳಿದ ಗುಣಗಳ ಫಲವನ್ನು ಕುರಿತು ಮತ್ತೊಬ್ಬ ಕವಿ ಹೇಳಿರುವದೇನೆಂದರೆ—

ಕಂ॥ ಎಲ್ಲಿ ಸುಶೀಲಂ, ಸದ್ಗುಣ | ಮೆಲ್ಲಿ, ದಯಾಧರ್ಮಮೆಸೆವ ಸತ್ಯಂ ನೆಲೆಗೊಂ ॥ ಡಲ್ಲಿಯೆ ಆಯುಂ ಸಿರಿಯುಂ | ಸಲ್ಲೀಲೆಯೊಳಿರ್ಪುವಲ್ತೆ ಚೂಡಾರತ್ನ ॥ —(ಸು)

ಇಂಥ ಸದ್ಗುಣಗಳನ್ನು ಮೊಟ್ಟಮೊದಲು ಅಳವಡಿಸಿಕೊಳ್ಳಬೇಕೆಂದು ಜ್ಞಾನಿಗಳು ಅವಸರಗೊಳಿಸಿ ಹೇಳಿರುವದೇನೆಂದರೆ—

ವಸಂತ—ಅಟತಾಳ

ಇಂದು ನಾಳೆಯು ಎನ್ನದೀಗಳೇ ಸುಕೃತವಡೆ; | ಮುಂದಾವಗಳಿಗೆಗೇನೇನಹುದೊ ? ಮನುಜ ॥ ಪ ॥ ತನುವೇನು ಶಾಶ್ವತವೆ? ಮನಕೆ ನಿಶ್ಚಲವಿಹುದೆ? | ಧನವು ಕುಲಗಿರಿಯೆ ? ಯತ್ನವಭಂಗವುಯವೆ? ॥ ವನಿತೆಯನುಕೂಲಿಸಿಯೆ? | ತನಯನಾಜ್ಞಾಧರನೆ ? | ಜನರೊಲುಮು ನಿಜವೆ ? ವಾಸನೆಯೇಕಮುಖಿಯೇ ? ॥ ೧ ॥ ಕುಜನರಲಸಿದರೆ? ವಿಘ್ನಂಗಳಕ್ಕಿಯು ಹೋಯ್ತೆ?| ರುಜೆಗೆ ವೈಮುರವೆ? ದುಃಖಕೆ ಮೂರ್ಛೆ ಬಂತೇ ? ॥ ನಿಜಬಂಧುವಳಿಯನೇ ? ಪೈಶೂನ್ಯವಡಗಿತ್ತೆ? | ವಿಜನದೇಶಕೆ ಪ್ರಮಾದವು ತಪಿಸಿಹೋಯ್ತೇ? ॥ ೨ ॥ ಚಾರವಳಿದನೆ ಗ್ರಹ

ಗಳಾಧಿ ವ್ಯತವಾಯಿತೇ ? | ದಾರಿದ್ರ್ಯಕೇಂ ಗಡುವೆ ? ಸಪ್ಪವಳಕುವದೇ ? || ಚೋರರತಿಧರ್ಮಿಗಳೆ ? ಲೋಭಕ್ಕೆ ಸಾಕಾಯ್ತೆ ? | ಕಾರುಣ್ಯಮುಂಟೆ ಯಮರಾಜನಿಗೆ ? ಕಡೆಗೆ || ೩ || ಸತಿಸುತರಿಗಿರಲೆಂದು ಸುಕೃತಮುಳಿದಿರಲಥೋ | ಗತಿ ನಿನಗೊ ? ತದನುಭವವವರ್ಗೋ ? ಬಳಿಕಾರ್ಗೋ ? || ಮೃತವಪ್ಪೆನೆಂದು ಕರುವಿಗೆ ಗೋವು ಪುಲ್ಮೆದೆಯ | ಜೊತೆಮಾಡುವದೆ ? ಲೋಕಬಂಧು ಶಿವನಿರನೇ ? || ೪ || ಕಾಲಮಿಹುದಿನ್ನುಮೆಸಲೀ ದೋಷಪದರಿಂದೆ | ಹಾಲಿದ್ದ ಕಾಲದಲೆ ಹಬ್ಬವೆಂದರಿದು || ಕೇಳದಾರನು ಯಥಾಶಕ್ತ್ಯಯಿಂ ಧರ್ಮಪರಿ | ಪಾಲನೆಯ ಮಾಡಿ ಗುರುಸಿದ್ಧನನು ವಲಿಸೈ || —(ಕೈ. ಕ)

ಆ ಸದ್ಗುಣಗಳ ಸಿದ್ಧಿಯುಂಟಾಗಬೇಕಾದರೆ ಮಾಡಬೇಕಾದ ತಪಶ್ಚರ್ಯವೇನೆಂದರೆ—

ವೃ|| ಮುನಿವವನಾದೊಡಂ ಪೆರರ್ಗೆ ಸೋವನೊಡರ್ಚದೆ, ರಂಭೆಯಾದೊಡಂ | ವನಿತೆಗೆ ಮೆಚ್ಚಿ ಸಿಲ್ಕದೆ, ದರಿದ್ರತೆಯಾದೊಡಮರ್ಥಿಗೇನುಮಿ || ಲ್ಲೆನಿಸದೆ, ಹಾಸಿಯಾದೊಡಮಸತ್ಯವ ಪೇಳದೆ, ಬಾಳ್ವ ಮರ್ತ್ಯನೇ | ಮುನಿವರನಾತನಾಚರಣೆಯುಗ್ರತಪಂ ಗುರುಮೂರ್ತಿ ಶಂಕರಾ || —(ಗು. ಶಂ. ಶ)

ಅದನ್ನೇ ಮತ್ತೊಬ್ಬ ಕವಿ ಬೇರೆ ರೀತಿಯಲ್ಲಿ ಹೇಳಿರುವದೇನೆಂದರೆ—

ಕಂ|| ಕಡಿಪಡೆಯದೆ ಕಾಮಿನಿಯರ | ಕಡೆಗಣ್ಣಂಬಿಂದೆ, ತೀವ್ರಕೋಪಾನಲನಿಂ || ಸುಡದೆ, ಬಹುವಿಷಯಲೋಭ | ಕ್ಕೆಡೆಯಾಗದೆ, ಬಾಳ್ವನಲೆ ! ಜಗತ್ತ್ರಯ ವಿಜಯಂ || —(ಧ. ನೀ)

ಈ ತಪಶ್ಚರ್ಯಕ್ಕೆಷ್ಟು ವಿಘ್ನಗಳೊದಗಿದರೂ ಅವುಗಳನ್ನು ಗೆಲ್ಲುವ ಉಪಾಯವೇನೆಂದರೆ—

ಕಂ|| ಸಹನನೆುಸಿಪಸಿಯ ಕರದೊ | ಳ್ವಹಿಸಿರೆ ದುರ್ಜನರಿನಕ್ಕುಮೇನೀ ಸರ್ಪಂ || ಸಹೆಯೊಳ್ನೀದಾರ್ಣದೆ ಹುತ | ವಹನಂಟಿರ್ದೆಂತು ಬಲ್ಮೆವಡೆದುಜ್ಜಳಿಪಂ ? || —(ನೀ. ಸಾ)

ಎಲ್ಲ ಗುಣಗಳೂ ಸಿದ್ಧಿಯಾಗಿ ಸಜ್ಜನನೆನಿಸಿದ ಲಕ್ಷಣವೇನೆಂದರೆ—

ಭಾ|| ಇನನುದಯಿಸಲಿ ಪಶ್ಚಿಮಾದ್ರಿಯೊ | ಳನಲನೊಮ್ಮೆ ಹಿಮಾಂಶುವಾಗಲಿ, | ಕನಕಗಿರಿಯಲ್ಲಾಟವಾಗಲಿ, ಪರ್ವತಾಗ್ರದಲಿ || ವನಜ ವಿಕಸಿತವಾದಡೆಯು, ಸ | ಜ್ಜನರುಗಳು ನುಡಿದೆರಡನಾಡರು | ಮನವಚನಕಾಯದಲಿ ಚಿತ್ತೈಸೆಂದನಾ ವಿದುರ || —(ಕ. ಭಾರ)

ಇದೇ ಅರ್ಥವನ್ನು ನೀತಿಶಾಸ್ತ್ರಕಾರರು ಹೇಳಿರುವದೇನೆಂದರೆ—

ಕಂ|| ನಿಂದಿಕೆ, ಮೇಣ್ಣಯವಿದರಭಿ | ನಂದಿಕೆ, ಸಿರಿಯೊರ್ಮೆ ಬರ್ಕೆ, ಪೋಕೆ ಯಥೇಷ್ಟಂ, || ಇಂದೇ ಮೃತಿಯೆೈದುಗೆ, ಮೇ | ಣ್ಮುಂದೈದುಗೆ, ನೀತಿಪಥವನುಳಿಯಂ ಧೀರಂ || —(ಧ. ನೀ)

ಮನುಷ್ಯನು ಪಡೆಯಬೇಕಾದ ಬೇರೆ ಬೇರೆ ಗುಣಗಳನ್ನು ಎಚ್ಚರಿಸಿ ಜ್ಞಾನಿಗಳು ಹೇಳಿರುವದೇನೆಂದರೆ—

ಮಾರವಿ—ಝಂಪೆ

ಅಧಿಕವಹ ಗುಣಗಳೆಲ್ಲವನಿಲ್ಲಿ ವಿವರಿಸುವೆ । ಸಧಿಕರಿದನಾಚರಿಸಿ ನಿಜವುಂ ಕ್ತರಹುದು ॥ ಪ ॥ ಸಕಲ ಪಾಪಂಗಳೊಳು ಪರರ ನಿಂದನೆಯಧಿಕ । ಸಕಲಪುಣ್ಯಾದೊಳನ್ನಪೋಷಣೆಯುದಧಿಕ॥ಸಕಲ ದುರ್ಗುಣಗಳೊಳು ಲೋಭವೆಂಬುವದಧಿಕ । ಸಕಲ ಸುಗುಣಂಗಳೊಳು ವಿತರಣವದಧಿಕ ॥ ೧ ॥ ಅಖಿಲಲಾಘವಗಳೊಳುದೇಹಿ ಯೆಂಬುವದಧಿಕ । ವಖಿಳ ಗೌರವದೊಳಗೆ ಯೋಚನೆಯುದಧಿಕ। ಅಖಿಲವಹ ತಪಗಳೊಳು ಸತ್ಯವೆಂಬುವದಧಿಕ।ವಖಿಲತೀರ್ಥದಿ ವಿಮಲಮಾನಸವದಧಿಕ ॥೨॥ ಎಲ್ಲ ಬಂಧನಗಳೊಳು ಭವಬಂಧನವದಧಿಕ । ಎಲ್ಲ ವಿಜಯದಿ ಕರಣಗಳ ವಿಜಯವಧಿಕ ॥ ಎಲ್ಲ ಜನ್ಮಂಗಳೊಳು ಮನುಜಜನ್ಮವದಧಿಕ। ಎಲ್ಲ ಸುಖಗಳೊಳು ವೈರಾಗ್ಯಸುಖವಧಿಕ ॥ ೩ ॥ ಸರ್ವಾಸನಂಗಳೊಳು ಸಿದ್ಧಾಸನವದಧಿಕ । ಸರ್ವಮುದ್ರೆಗಳೊಳಗೆ ಶಾಂಭವಿಯುದಧಿಕ ॥ ಸರ್ವ ನಾಡಿಗಳೊಳು ಸುಷುಮ್ನನಾಡಿಯುದಧಿಕ । ಸರ್ವಲಕ್ಷ್ಯದಿ ಪೂರ್ಣಲಕ್ಷ್ಯವತ್ಯಧಿಕ ॥ ೪ ॥ ನಿಖಿಲವಹ ಗುರುಗಳೊಳು ಗುರುಸಿದ್ಧನತ್ಯಧಿಕ । ನಿಖಿಲವಿದ್ಯದಿ ಬ್ರಹ್ಮವಿದ್ಯವಧಿಕ ॥ ನಿಖಿಲಯೋಗಂಗಳೊಳು ರಾಜಯೋಗವದಧಿಕ । ನಿಖಿಲಪದದೊಳು ಮುಕ್ತಿಪದವಿಯತ್ಯಧಿಕ ॥

—(ಕೈ. ಕ)

ಇವುಗಳನ್ನೆಲ್ಲ ಮುಖ್ಯವಾದ ಎರಡು ಭಾಗವಾಗಿ ಸಂಗ್ರಹಿಸಿ ನೀತಿಶಾಸ್ತ್ರಕಾರರು ಹೇಳಿರುವದೇನೆಂದರೆ—

ಶ್ಲೋ॥ ನಹಿ ಸತ್ಯಾತ್ಪರೋಧರ್ಮಃ; ನಾನೃತಾತ್ಪಾತಕಃ ಪರಮ್ ॥ –(ಸು)

ಅ॥ ಸತ್ಯಕ್ಕಿಂತ ಹೆಚ್ಚಿನ ಧರ್ಮವಿಲ್ಲ; ಸುಳ್ಳಿಗಿಂತ ಹೆಚ್ಚಿನ ಪಾಪವಿಲ್ಲ.

ಸತ್ಯವಂತರೇ ಜಗತ್ತಿಗೆ ಗತಿಯೆಂದು ಸರ್ವಜ್ಞನು ಹೇಳಿರುವದೇನೆಂದರೆ—

ತ್ರಿ॥ ಸತ್ಯರೂ ಹುಸಿದಡೆ, ಒತ್ತಿ ಹರಿದಡೆ ಶರಧಿ, । ಉತ್ತಮನು ತಪ್ಪಿ ನಡೆದಡೆ, ಲೋಕವಿ । ನ್ನೆತ್ತ ಸೇರುವದು ? ಸರ್ವಜ್ಞ ॥ (—ಸ. ಪ)

ವಿವೇಕಿಗಳು ಸತ್ಯಕ್ಕೆ ಕಟ್ಟಿರುವ ಬೆಲೆಯೇನೆಂದರೆ—

ಶ್ಲೋ॥ ಅಶ್ವಮೇಧಸಹಸ್ರಂ ಚ ಸತ್ಯಂ ಚ ತುಲಯಾ ಧೃತಮ್; । ಅಶ್ವಮೇಧಸಹಸ್ರಾದ್ಧಿ ಸತ್ಯಮೇವ ವಿಶಿಷ್ಯತೇ ॥ —(ಸಂ. ಭಾರ)

ಅ॥ ಸಹಸ್ರ ಅಶ್ವಮೇಧಗಳನ್ನೂ ಸತ್ಯವನ್ನೂ ತಕ್ಕಡಿಗೆ ಹಾಕಿ ತೂಗಿ ನೋಡಿದ್ದರಲ್ಲಿ ಸಹಸ್ರ ಅಶ್ವಮೇಧಗಳಿಗಿಂತ ಸತ್ಯವೇ ಹೆಚ್ಚಿನದು.

ಜನರಿಗೆ ಉಪದೇಶವನ್ನು ಮಾಡುವದಕ್ಕೆ ಹೊರಟ ವೇದವು 'ಸತ್ಯಂ ವದ' ಎಂಬ ಮಾತಿನಿಂದ ನಿಜವನ್ನು ಹೇಳೆಂದು ಮೊದಲು ಉಪದೇಶಮಾಡಿರುವದು. ಇಷ್ಟೇ ಅಲ್ಲ. 'ಸತ್ಯಾನ್ನ ಪ್ರಮದಿತವ್ಯಂ' ಎಂಬ ಮಾತಿನಿಂದ ಸತ್ಯವನ್ನು ತಪ್ಪಬಾರದೆಂದೂ "ಸತ್ಯೇನ ಲಭ್ಯಸ್ತಪಸಾಹ್ಯೇಷ ಆತ್ಮಾ" ಎಂಬ ಮಾತಿನಿಂದ ಈ ಆತ್ಮನು ಸತ್ಯದಿಂದ ಪಡೆಯಲ್ಪಡತಕ್ಕ

ವನೆಂದೂ 'ಸತ್ಯಮೇವ ಜಯತಿ ನಾನೃತಮ್' ಎಂಬ ಮಾತಿನಿಂದ ಸತ್ಯವೇ ಗೆಲ್ಲುವದೇ ಹೊರತು ಸುಳ್ಳಲ್ಲವೆಂದೂ ಅನೇಕಕಡೆ ಹೇಳಿರುವದು.

ಮಾತಿಗೆ ತಪ್ಪುವವನನ್ನು ಭಾಗವತರು ಬಯ್ದಿರುವದೇನೆಂದರೆ—

ಆಸೆಮಾತನು ಕೊಟ್ಟು ಭಾಷೆ ತಪ್ಪುವ ಹೊಲೆಯ; । ಲೇಶ ಉಪಕಾರಗಳ ಮಾಡದವ ಹೊಲೆಯ; ॥ ಮೋಸದಲಿ ಮುನಿದು ಮನುಜನ ಕೆಡಿಸುವವ ಹೊಲೆಯ; । ಹುಸಿಯ ಬಗುಳುವನೊಬ್ಬ ಹುಚ್ಚ ಹೊಲೆಯ ॥ —(ದಾ)

ಇದನ್ನೆಲ್ಲ ನೋಡಿಯೇ ಭಾಗವತೋತ್ತಮರು ಕೀರ್ತನಾರಂಭದಲ್ಲಿ 'ಸತ್ಯವೆಂಬುದೊಂದೇ' ಎಂದು ಮುಂತಾಗಿ ಉಪದೇಶಮಾಡಿರುವರು. ಇದಕ್ಕೆ ಉದಾಹರಣೆಯಾಗಿ ಈಗ ಹರಿಶ್ಚಂದ್ರೋಪಾಖ್ಯಾನವು ನಿರೂಪಣಮಾಡಲಾಗುವದು.

---

## ಆಖ್ಯಾನ

ಕೀ॥ ಇದ್ದನಯೋಧ್ಯೆಯೊಳಿಕ್ಷ್ವಾಕುವ ಕುಲ । ದುದ್ಧಾರಕನು ಹರಿಶ್ಚಂದ್ರ; ॥ ಶುದ್ಧ ಸತ್ಯವಂತನು ಸಜ್ಜನರೊಳು । ಶ್ರದ್ಧಾವಂತನು ಭೂಪೇಂದ್ರ ॥

ಆ ಸಮಯದಲ್ಲಿ ದೇವಲೋಕದಲ್ಲಿ ಒಂದು ದಿನ ಸಭೆ ನೆರೆದಿದ್ದಾಗ ಭೂಲೋಕದ ವಿಶೇಷವನ್ನು ಹೇಳುವ ಪ್ರಸಂಗದಲ್ಲಿ ವಸಿಷ್ಠರು ಹೇಳಿದ್ದು—

ವಾ॥ ಧರೆಯೊಳು ಹರಿಶ್ಚಂದ್ರಭೂಪರಂ ತನ್ನ ನಾ । ರ್ದರ, ಬೇಡಿದರ, ಬಯಸಿದರ, ನೋಂಕಿದರ, ಬೆರಸಿ । ದರನು ತನ್ನಂತೆ ಮಾಳ್ಪನ್ನತಿಕೆಯನು ಕಂಡು ನಾಚಿ ಸಿಗ್ಗಾಗಿ ಸೆಡೆದು ॥ ಮರನಾಯ್ತು ಚಂದನಂ; ಸ್ವರ್ಗಸ್ಥವಾಯ್ತು ಸುರ । ತರು; ಮೂಗುವಟ್ಟುದಮರರ ಧೇನು; ಕಲ್ಲಾಯ್ತು । ಪರುಷ; ಕಟ್ಟನೆ ಕರಗಿತೆನೆ ಸಿದ್ಧರಸವೆಂದು ಮೊದಲಾಗಿ ಮೂಜಗದೊಳು ॥ —(ಹ. ಕಾ)

ಟಿ॥ ಮೂಗುವಟ್ಟುದು—ಮಾತಾಡದಂತಾಯಿತು. ಪರುಷ—ಸ್ಪರ್ಶಮಣಿಯೆಂಬ ಮಣಿ.

ಇದೆಲ್ಲ ಅತ್ಯುಕ್ತಿಯೆಂದಾಕ್ಷೇಪಿಸಿದಾಗ ವಸಿಷ್ಠರು ಮತ್ತೆ ಹೇಳಿದ್ದು—

ಕಂ॥ ರವಿ ಪಡುವೆಟ್ಟಿನೊಳೊಗೆದೊಡ । ಮುಪಿತಥಮಾ ಮೇರುಭೂಧರಂ ಚಲಿಸಿದೊಡಂ, ॥ ಪವನಸಖಂ ತಣ್ಣಾದೊಡ । ಮವನಿಯೊಳೊಳ್ಳಿದರ ಶೀಲಮೇಂ ಕದಲುಗುಮೇ ? —(ನ. ಶ)

ಇದು ಬರೀ ನಾಲಿಗೆಯ ತುದಿಯ ಮಾತೇ ಹೊರತು ನಿಜವಾಗುವದು ಶಕ್ಯವಲ್ಲವೆಂದು ವಿಶ್ವಾಮಿತ್ರರಾಕ್ಷೇಪಿಸಲು ವಸಿಷ್ಠರು ಹೇಳಿದ್ದು—

ವಾ॥ ಇಳೆ ತಳಕ್ಕಿಳಿಯೆ, ಸಸಿ ಬಿಸಿಯಾಗೆ, ಮೇರುಗಿರಿ । ಚಲಿಸೆ, ರವಿ ಕಂದೆ, ಜಲನಿಧಿ ಬತ್ತೆ, ಶಿಖಿ ಹಿಮಂ । ದಳೆದ ದಿನದೊಳು ಸತ್ಯಸಿಧಿ ಹರಿಶ್ಚಂದ್ರ

ರಾಯನ ವಾಕ್ಯದೊಳು ಹುಸಿಗಳು || ವೊಳೆಯುವಿದು ಸಿರುತವಾನರಿಯುಲಾತನ ಸತ್ಯ | ದಳವನರಿವೊಡೆ ನೊಸಲಕಣ್ಣುಳ್ಳನಾಗಬೇ | ಕುಳಿದಪರಿಗಳವಡದು; ನೀನೇ ಪರೀಕ್ಷಿಸುವೆಯೆಂದನಾ ಮುನಿನಾಥನು || —(ಹ. ಕಾ)

ಇದು ಹೇಗೆ ಕೊನೆಗೊಂಡಿತೆಂದರೆ—

ಸಾ|| ಕುಶಿಕಸುತನು ನರಪಾಲನ ಮಾತನು | ಹುಸಿಗೈದಪೆ ನಾನೆಂದ; || ಹುಸಿದರವನು ಜಾತಿಯು ಬಿಡಲಿತರನು | ಮುನಗಿಡ ಪರಿಯುಲಿ ನಿಂದ; ||

ಇದೆಲ್ಲ ಮುಗಿದ ಮೇಲೆ ವಸಿಷ್ಠರು ತನ್ನ ಶಿಷ್ಯನಾದ ಹರಿಶ್ಚಂದ್ರನ ಬಳಿಗೆ ಬಂದು ಎಚ್ಚರಿಕೆಯನ್ನು ಕೊಟ್ಟದ್ದು—

ಬೇಗಡೆ—ರೂಪಕ

ತಪ್ಪಬೇಡವೊ | ನೀನಾಡಿರುದಕೆ || ಪ || ಒಮ್ಮೆ ನೀನು ನುಡಿದ ಮೇಲೆ | ನುಮ್ಮನದನು ನಡೆಸಬೇಕು; || ಹೆಮ್ಮೆಗೊಳ್ಳದೆ ನಡೆಯಬೇಕು; | ಸುಮ್ಮಾನವ ಪಡೆಯಬೇಕು || ೧ || ಸತ್ಯವೇ ಶಮ; ಸತ್ಯವೇ ದಮ; | ಸತ್ಯವೇ ತಪ; | ಸತ್ಯವೇ ಜಪ || ಸತ್ಯವೇ ಶ್ರುತಿ; ಸತ್ಯವೇ ಸ್ಮೃತಿ; | ಸತ್ಯವೇ ಯಜ್ಞಾದಿಕರ್ಮ || ೨ || ಸತ್ಯದಿಂಡ ಲೋಕದುಳಿವು; | ಸತ್ಯದಿಂದ ಹಗೆಗಳಳಿವು; || ಸತ್ಯಮಾರ್ಗ ವರ್ತನೆಯ | ಸತ್ಯನೋಕ್ಷವರಿತು ನೋಡೆ || ೩ ||

ಎಂದು ಹೇಳಿ ವಿಶ್ವಾಮಿತ್ರರ ಆಶ್ರಮದ ಕಡೆಗೆ ಹೋಗಬೇಡವೆಂದು ಅವರು ಸೂಚಿಸಿದ ಕೆಲವು ಕಾಲದ ಮೇಲೆ ಪ್ರಜೆಗಳು ಬಂದು ಹರಿಶ್ಚಂದ್ರನಿಗೆ ದೂರು ಹೇಳಿಕೊಂಡದ್ದು—

ದಿ|| ಪಶುಗಳಂ ಜನರಂ ಬಾಧಿಕುಂ ಮೃಗಂಗಳ್; | ಎಸೆಸ ವ್ಯಾಪಾರಂ ನಿಂತುದೀಗ ನೋಡಲ್; || ಸಸಿಗಳಂ ಕಾಡಾನೆಗಳು ತುಳಿವವೀಗ; | ಬೇಸನು ಬೇಂಟೆಯುನಾಡಲ್ಕೆ ನೀನು ಬೇಗ ||

ಅದಕ್ಕೆ ರಾಜನು ಹೂಂಗುಟ್ಟುತ್ತಲೆ ಬೇಟೆಗಾರರು ಸಿದ್ಧರಾದದ್ದು—

ಸಾಂ|| ಉಟ್ಟ ಕಾಗಿನ ದಟ್ಟಿ, ಮೆಟ್ಟಿದ ಎಕ್ಕಡ, | ಇಟ್ಟುಕೊಂಡಿಲ್ಲುವ ಬಡಿ ಕೋಲು, || ಇಟ್ಟಿ, ಸಬಳ, ಬಿಲ್ಲಂಬು, ಸುರಗಿ, ಸಹ | ದಿಟ್ಟ ಶಬರರೊದಗಿದರು || —(ಹ. ಸಾಂ)

ಅವರೊಡನೆ ಹರಿಶ್ಚಂದ್ರನು ಬೇಟೆಗೆ ಹೊರಟು ಬರುತ್ತಿರುವಾಗ ಅವನನ್ನು ಮೋಸದಿಂದ ಆಶ್ರಮಕ್ಕೆ ಸೆಳೆಯಲು ವಿಶ್ವಾಮಿತ್ರನು ಮಾಯೆಯಿಂದ ಮಾಡಿ ಕಳುಹಿಸಿದ ಜಿಂಕೆ ಮುಂದೆ ಬರುತ್ತಿರುವವನ್ನು ನೋಡಿ ಅವನು ಹೇಳಿದ್ದು—

ಶ್ಲೋ|| ತೃಣಮುಖಮಪಿ ನ ಖಲು ತ್ವಾಮ್ | ತ್ಯಜಂತಿ ಹೇ ಹರಿಣ, ವೈರಿಣಃ ಶಬರಾಃ; || ಯಶಸ್ಯೈವ ಜೀವಿತಮಿದಂ | ತ್ಯಜ ಯೋಜಿತಶೃಂಗಸಂಗ್ರಾಮಃ || —(ಸು)

ಅ|| ಎಲೇ ಜಿಂಕೆಯೆ, ನೀನು ಬಾಯಲ್ಲಿ ಹುಲ್ಲು ಕಚ್ಚಿಕೊಂಡರೂ ನಿನ್ನ ಹಗೆಗಳಾದ ಬೇಡರು ನಿನ್ನನ್ನು ಬಿಡುವದಿಲ್ಲ. ಆದ್ದರಿಂದ ಕೊಂಬುಗಳನ್ನು ಮುಂದು ಮಾಡಿ ಕಾದುವದಕ್ಕೆ ನಿಂತು ಕೀರ್ತಿಯನ್ನುಳಿಸಿಕೊಂಡು ಜೀವವನ್ನು ಬಿಡು.

ಎಂದು ಗುರಿಯಿಟ್ಟು ನೋಡಿ ತಳಮಳಗೊಂಡು ಹೇಳಿದ್ದು—

ವೃ|| ಕ್ಷಣದೊಳಡಂಗುಗುಂ; ಬಳಿಕೆ ಪೊರ್ದುಗುಮಾಕ್ಷಣಗೋಚರತ್ವಮುಂ; | ಕ್ಷಣದೊಳೆ ದೂರಮಪ್ಪುದೆಡೆಯೊಳ್ ಸುಳಿಗುಂ; ಪಲವುಂ ಬರಂಪಮುಂ||ತಿಣಿಸಿದೊಡತ್ತ ಮತ್ತ ಕೆಲದೊಳ್ ಬಲದೊಳ್ ಸಲೆ ಸುತ್ತಮಾಟಿಕುಂ;| ಕ್ಷಣರುಚಿಯಂತೆ ಚಂಚಲಮೆನಿಪ್ಪುದ ನಾಂ ಗುರಿಗೈವೆನೆಂತಿದಂ?|| –(ಚಂ.ಕೌ.ನಾ)

ಟಿ|| ಆಟಿಕುಂ–ಆಡಿಸುತ್ತದೆ. ಕ್ಷಣರುಚಿಯಂತೆ–ಮಿಂಚಿನ ಹೊಳಪಿನಂತೆ.

ಹೀಗೆಂದು ಹಿಂದಟ್ಟಿಕೊಂಡು ಹೋಗಿ ಕೊನೆಗೆ ಅದಕ್ಕೆ ಹೊಡೆಯಲಾರದೆ ಆ ಪ್ರಾಂತವನ್ನು ನೋಡಿ ಬೆರಗಾಗಿ ಹೇಳಿದ್ದು—

ಸೀ|| ಇದನು ನೋಡಿದ ಮಾತ್ರದಿಂದೆನ್ನ ಹಸಿವಡಗಿ–ದುದು; ಶಾಂತಿಯಾದುದಾಯಾಸವಳಿದು; | ಮುಂದದೊಳೀ ಕಡೆಯೊಳಗೆ ಮದಯಾನೆಯೊಲಿದು ಸಿಂಹದ ಮೊಲೆಯ ಚಪ್ಪರಿಸುತುಣ್ಣುತಿಹುದು; | ಇದು ತನ್ನ ಭಕ್ಷ್ಯವೆನ್ನದೆ ಬೆಕ್ಕು ತಾ ಮೂಷ– ಕದ ಮೈಯ್ಯನೇ ಮತ್ತೆ ನೆಕ್ಕುತಿಹುದು; | ಹದವಾದ ನೆಲೆಂದು ನವಿಲ ಬಳಿಯೊಳು ಹಾವು – ಹೆದರದೇ ಹೆಡೆಯೆತ್ತುತಾಡುತಿಹುದು; || ಇದನು ನಾ ನೋಡಲಾಶ್ಚರ್ಯವಹುದು; | ಇದು ಪುಣ್ಯಭೂಮಿಯೇ ಆಗದಿರದು;|| ಇದರಳವನು ವಿಚಾರಿಸುವೆನೊಲಿದು; | ಇದರ ನಾಯಕನಾರೊ? ತಿಳಿಯಬಹುದು ||

ಹೀಗೆಂದು ವಿಚಾರಮಾಡುವದಕ್ಕೆ ಹೊರಟು ಆಶ್ರಮದ ಪವಿತ್ರತೆಯನ್ನು ಮತ್ತೆ ನೆನೆಸಿಕೊಂಡು ಯೋಚಿಸಿದ್ದು—

ವಾ|| ಈ ಮುನಿಯ ಚಾರಿತ್ರದೊಳು ಗಂಗೆ ಹುಟ್ಟದಿರ | ಳೀ ಮುನಿಯ ಶಾಂತಿಯೊಳು ಚಂದ್ರಮುಂ ಜನಿಸದಿರ | ನೀಮುನಿಯ ವದನದೆ ದಯಾಪನಧಿ ಸುರಕುಜಂ ಸುರಧೇನು ಪೊಣ್ಮದಿರವು; || ಈ ಮುನಿಯ ನವಿಯ ನುಡಿಯಿಂದಮೃತ ಮೊಗೆಯದಿರ | ದೀ ಮುನಿಯ ಸುಳುಹಿನೊಳು ತಂಗಾಳಿ ಜನಿಸದಿರ | ದೀ ಮುನೀಂದ್ರಂ ಮುನಿಯ ವೇಷದೀಶ್ವರನಾಗದಿರನೆನುತ ನಡೆತಂದನು ||–(ಹ. ಕಾ)

ಆಮೇಲೆ ವಿಚಾರಮಾಡಿದಾಗ ಅದು ವಿಶ್ವಾಮಿತ್ರರ ಆಶ್ರಮವೆಂದು ತಿಳಿಯುತ್ತಲೆ ಪಶ್ಚಾತ್ತಾಪಗೊಂಡದ್ದು—

ಕಮಾಚು–ಛಾಪು

ತಿಳಿವಿಲ್ಲದವ–ನಾದೆನೇ ಅಯ್ಯೊ! | ಇಳೆಯೊಳು ನಾನು || ಪ || ಮೃಗಸಂಕುಲವ–ಮಿಗೆ ಬೇಂಟೆಯಾಡೆ–ಬಂದೆ, ಕೊಂದೆ, ಇಂದೇ–ಹಗರಣವಂ ಗೈದೆನು || ಅ ಪ || ಕಳಕೊಂಡೆ ನಾನು ಮತಿಯ–ಸದ್ಗತಿಯ–ಶುಭತತಿಯ–ಕುಲಪತಿಯ–ತಳೆದೆಂ ಬಲುಭ್ರಾಂತಿಯ | ತಿಳಿಯೆ ಕ್ಷುದ್ರ ಲಾಭ–ಕಾಗಿ | ಬಲುವಿಪತ್ತ ತಂದು ಕೊಂಡೆ || ೧ ||

ಹೀಗೆ ಹೇಳುತ್ತ ಹೆಂಡತಿಯ ತೊಡೆಯ ಮೇಲೆಯೇ ತಲೆಯನ್ನಿಟ್ಟು ಮಲಗಿದ ಹರಿಶ್ಚಂದ್ರನು ಬೆಚ್ಚಿಬಿದ್ದು ಎದ್ದು ಕಣ್ಣೀರಿಡುತ್ತ ಕನವರಿಸಿದ್ದು—

ಕಂ|| ಬಿಡು ಕೋಪವನು; ಮುನಿಯೆ, | ಅಡಿಗೆರಗಿ ಬೇಡುವೆನು; | ಕೊಡ ಬೇಡ ಶಾಪವನು ಮುನಿಯುತೆನಗೆ; || ಹಿಡಿಯೆನ್ನನುಂ ನಿನ್ನ | ಕಡುದೀನ ಶಿಷ್ಯರೊಳು; | ಬಿಡು ಕೋಪವನು; ಮತ್ತೆ ಬೇಡಿಕೊಂಬೆ ||

ಆಗ ಹೆಂಡತಿಯು ಅವನನ್ನು ಎಚ್ಚರಿಸಿ ಕೇಳಿದಾಗ ಅವನು ತನ್ನ ಕನಸನ್ನು ಹೇಳಿದ್ದು—

ಶ|| ಸಿಡಿಲೆರಗಿತು; ಮನೆ | ಬಿಡದುರುಳಿತು; ಬಿಳಿ | ಗೊಡೆ ಮುರಿದಿತು; ಮುಗ್ಗರಿಸಿದೆನು; || ಕಡೆಯೊಳಿದೆಯ ಮೇ | ಗಡೆ ಕಾಗೆಗಳಿರೆ | ಕೆಡೆದವು ಕೊಳ್ಳಿ ಗಳೆಲ್ಲೆಡೆಯೊಳ್ ||

ಕೊನೆಗೆ ಊರಿಗೆ ಹೋಗಿ ಇದಕ್ಕೆ ಶಾಂತಿಯನ್ನು ಮಾಡಿಕೊಳ್ಳಬೇಕೆಂದು ಪ್ರಯತ್ನಿಸುತ್ತಿರುವಾಗ ವಿಶ್ವಾಮಿತ್ರನು ಮಾಯೆಯಿಂದ ನಿರ್ಮಿಸಿ ಕಳುಹಿಸಿದ ಚಂಡಾಲಕನ್ಯೆಯರು ಹರಿಶ್ಚಂದ್ರನ ಬಳಿಗೆ ಬರುತ್ತಿದ್ದದ್ದು—

ಚೌ|| ಹಗಲ ನೋಡಲು ಬಂದು ತೋರುವ-ಬಗೆಯ ಕಾರಿರುಳಂದದಿ | ಮುಗಿ ವಿಷದ ಹೊಗೆ ಹೊಯ್ದು ಜಲದೇ-ವಿಗೆ ಸಖಿಯರೆಂಬಂದದಿ || ನೆಗಳ್ದ ಕರಿಗಲ್ಗೊಂಬೆ ಜೀವದ – ಸೊಗಸದಳೆದಿರ್ಪಂದದಿ | ಹಗರಣದ ಹೊಲತಿಯರು ಬಂದರು-ನಗುತ ನಗುತಾನಂದದಿ ||

ಹೀಗೆ ಬಂದ ಆ ಹೊಲತಿಯರು ಮಾಡಿದ ನರ್ತನವನ್ನು ನೋಡಿ ಮೆಚ್ಚಿದ ಹರಿಶ್ಚಂದ್ರನು ಬೇಕಾದದ್ದನ್ನು ಬೇಡಿರೆನ್ನಲು ಅವರು ಬೇಡಿದ್ದು—

ಸಾ|| ಕೊಡು ನಿನ್ನಯ ಬೆಳುಗೊಡೆಯನರಸನೇ, | ಕಡುಕಷ್ಟದಿ ನಾವಿಹೆವು; || ತಡೆಯಲಾರೆವೀ ಬಿಸಿಲತಾಪವನು; | ತಡಗೈದೊಡೆ ಸಾಯುವೆವು ||

ಬೆಳುಗೊಡೆಯು ಇತರರಿಂದ ಪಡೆಯತಕ್ಕದ್ದಲ್ಲವೆಂದು ತಿಳಿದು ಮಂತ್ರಿಯು ಸೂಚಿಸಿದ್ದನ್ನರಿತು ಹರಿಶ್ಚಂದ್ರನು ಅವರನ್ನು ಚಾಟಿಯಿಂದ ದಂಡಿಸಿದಾಗ ಅವರು ಅತ್ತ ಘೋರಶಬ್ದವನ್ನು ಕೇಳಿ ವಿಶ್ವಾಮಿತ್ರನು ಕೋಪದಿಂದ ಬರುತ್ತ ಹೇಳಿದ್ದು—

ವೃ|| ಆವನಿವಂ ಕಠೋರನತಿನಿರ್ದಯಮಾನಸನಾಚರಿಪ್ಪನೋ | ವೋವೊ! ತಪೋವನಕ್ಕುಚಿತಮಲ್ಲದ ಘೋರನೃಶಂಸಕರ್ಮಮಂ; || ಈ ವಿಶಿಖಾಗ್ರದಿಂದವನ ಕಂಧರಮಂ ಪರಿದೆಲ್ಲವಂಗಮಂ | ಪಾವಕನೊಳ್ಜ್ವಲಚ್ಛಿಖಿನೊಳಾನಿರದಾಗಿಪೆನಿಂದು ಹೋಮಮಂ || —(ಚಂ. ಕೌ. ನಾ)

ಹೀಗೆ ಕ್ರುದ್ಧನಾಗಿ ಬಂದ ವಿಶ್ವಾಮಿತ್ರನು ತನ್ನನ್ನು ನೋಡಿದೊಡನೆ ಕಾಲಿಗೆ ಬಿದ್ದ ಹರಿಶ್ಚಂದ್ರನನ್ನು ನೋಡಿ ಆಶ್ರಮವಿರುದ್ಧವಾದ ಕರ್ಮವನ್ನು ಮಾಡಿದುದೇಕೆಂದು ಗರ್ಜಿಸಲು ಹರಿಶ್ಚಂದ್ರನು ಕೈಜೋಡಿಸಿಕೊಂಡು ಹೇಳಿದ್ದು—

ಭೋ|| ಬಿಳಿಯ ಕೊಡೆಯ ಕೇಳ್ವ ಜನಗ | ಳೆಳೆಯನಪಹರಿಸುವರೆಂದು | ತಿಳಿಯುತವರ ಶತ್ರುಪಕ್ಷವಾಗಿ ಭಾವಿಸಿ || ಬಲುಹದೋರ್ದೆನವರ ಮೇಲೆ; | ತಿಳಿದು ನೋಡು ರಾಜತನದ | ಬೆಲೆಯನರಿತ ನೀನು ಶಾಂತರೀತಿಯಿಂದಲಿ ||

ಆಗ ವಿಶ್ವಾಮಿತ್ರನು ಹೇಳಿದ್ದು—

ಸಾಂ|| ಹಡೆದ ತಾಯ್ತಂದೆಗಳಲ್ಲದೆ ಹೆಂಗಳ | ಹೊಡೆವಧಿಕಾರವುನೋಡೆ ||
ಒಡಗೂಡಿದವಗೊಬ್ಬಗುಂಟದರಿಂದ ನೀ | ನೊಡಗೂಡುವದು ಹೊಲತಿಯರ ||

ಅದಕ್ಕೆ ಹರಿಶ್ಚಂದ್ರನ ಉತ್ತರ—

ವಾ|| ಹೆತ್ತ ತಾಯಂ ಮಾರಿ ತೊತ್ತ ಕೊಂಬೆನೆ? ಮೃಗ | ನಿತ್ತು ಕನ್ನಡಿಯ ನೋಡುವರೆ? ಮಾಣಿಕದೊಡವ | ನೊತ್ತೆಯಿಟ್ಟೊಡೆದ ಗಾಜಂ ಹಿಡಿವರೇ? ಕೋಪದಿಂ ಸತ್ತು ಮದುವೆಯಹರೇ? || ಕತ್ತುರಿಯನುರುಹಿ ಕರಿಗುರುಳ ಸಿಕ್ಕುವರೆ? ನೆರೆ | ಚಿತ್ತಯಿಸು ಹೊಲತಿಯರ ಪಿಡಿದು ನಾನೋಪದಿ | ಪ್ಪತ್ತೊಂದು ತಲೆವೆರಸಿ ನರಕಕ್ಕೆ ಹೋಹೆನೇ ಮುನಿನಾಥ ಕೇಳೆಂದನು||-(ಹ. ಕಾ)

ಅಥವಾ ಹೊಲತಿಯರೆಂಬ ಮಾತೂ ಇರಲಿ. ಸಾಮಾನ್ಯವಾಗಿ ನಮಗೆ ತಮ್ಮಂಥ ಹಿರಿಯರ ಉಪದೇಶವಿರುವದೇನೆಂದರೆ—

ದೇವಗಾಂಧಾರಿ—ಅಟತಾಳ

ಹೆಣ್ಣಿಗಿಚ್ಛೆಸುವರೆ ಮೂಢ? ಇದನು | ಕಣ್ಣಿ ಕಿವಿ ಮೈಮನಗಳಿಂ ನೋಂಕಬೇಡ || ಪ || ತಾಯಾಗಿ ಮೊದಲು ಹಡೆದಿಹುದು; | ಮೇಲೆ | ಜಾಯೆಯೆಂದೆನಿಸಿ ಕಾಮದೊಳು ಕೆಡಹುವದು; || ಕಾಯದೊಳು ಜನಿಸಿ ಸುತೆಯಹುದು; | ಇಂತು | ಮಾಯೆಯೇ ನಿನ್ನ ಬಹುವಿಧದಿ ಕಾಡುವದು || ೧ || ಹಿತಶತ್ರುವಾಗಿ ಹೊಂದುವದು; | ನಿಪುಣ | ರತಿಗೊಟ್ಟು ನಿತ್ಯಮುಕ್ತಿಯನೆ ಸೆಳೆಯುವದು; || ಕ್ಷಿತಿಯ ಪೂಜ್ಯತೆಯ ಕೆಡಿಸುವದು; | ಮುಂದೆ | ಶತಜನ್ಮಗಳಿಗೆ ಹೊಣೆಯಾಗಿ ನಿಲ್ಲುವದು || ೨ || ಬಗೆಯೆ ತನುವೆಲು ನರವು ಖಂಡ; | ಅದರೊಳಗೆ ಪಾಯುರಂಧ್ರವದು ಕಿಸುಕುಳದ ಹೊಂಡ; || ಭಗವೆಂಬುವದು ಮೂತ್ರಭಾಂಡ; | ಅದಕೆ | ಪಗಡಿಸದೆ ನಿನಗೆ ನಿಜಸುಖವಿಲ್ಲ ಕಂಡ್ಯ || ೩ || ಒಸೆದು ವಾಲಿಯನೆ ಕೊಲಿಸಿಹುದು; | ಹಾಂಗೆ | ಹೆಸರು ಮಾತ್ರದೊಳು ಕೀಚಕನ ನುಳಿಸಿಹುದು; || ದಶಕಂಠನಸುವ ಕಳೆಸಿಹುದು; | ಇಂದ್ರ | ಶಶಿಗಳಂಗದಿ ಭಗಕ್ಷಯಗಳೆಸಗಿಹುದು || ೪ || ವರಸೆವಾವೆಗಳನಳಿಸುವದು; | ನೋಂಕಿ | ದರ ಮೇಲೆ ಪಾತಕದ ಹೊರೆಯ ಹೊರಿಸುವದು; || ನರಕದರಮನೆಯೊಳಿರಿಸುವದು; | ನಮ್ಮ | ಗುರುಸಿದ್ಧನಡಿಗವರ ದೂರವೆನಿಸುವದು || —(ಕೈ. ಕ)

ವಿಶ್ವಾಮಿತ್ರರು ಹುಬ್ಬನ್ನು ಗಂಟಿಕ್ಕಿ ಹೇಳಿದ್ದು—

ಕೀ|| ದಾನಕೊಟ್ಟ ದಾಕ್ಷಿಣ್ಯವಿರದ ನೀ | ನೇನೇನೋ ಮಾತಾಡುವೆಯ?||
ಮಾನವೇಂದ್ರನೆಂಬುಬ್ಬಿನಿಂದ ಮುಂ | ಗಾಣದೇನನೋ ಹರಟುವೆಯ? ||

ಇದು ಕೊನೆಗಂಡದ್ದೆಂತೆಂದರೆ—

ಸಾಂ|| ಬೇಡಿದೆನೆ ನರಪನು ರಾಜಸೂಯದಿ ವೆಚ್ಚ | ಮಾಡಿದಷ್ಟನೆ ಬೇಡೆ ಮುನಿಯು || ನೀಡಿದನಾಗಲೆ ನರಪತಿ; ಸಂತಸ | ಗೂಡಿದನಾದನು ಮುನಿಯು ||

ಆಗ ಹೊಲತಿಯರು ತಮಗೆ ಸಮಾಧಾನವೇನೆನ್ನಲು ಮತ್ತೆ ವಿಶ್ವಾಮಿತ್ರನು ಅವರನ್ನು ಮದುವೆಯಾಗಬೇಕೆಂಬ ಮಾತು ತೆಗೆದಾಗ ಹರಿಶ್ಚಂದ್ರನು ಹೇಳಿದ್ದು—

ಭೋ|| ಪಳಿಯುದಿಹುದೆ ಧರ್ಮ, ತಸುವ | ಕಳಿಯುದಿಹುದೆ ಸಿದ್ಧಿ, ಚಿತ್ತ| ವಲುಗದಿಹುದೆ ಮುಕ್ತಿ, ಮರೆಸು ನುಡಿದ ವಕ್ಕಣೆ || ಅಳಿಯುದಿಹುದೆ ಸತ್ಯ, ರೋಷ | ಪಳಿಸುದಿಹುದೆ ಶಾಂತಿ, ಕಪಟ | ವೊಳಿಯುದಿಹುದೆ ಸೌಖ್ಯವಿದ ತಿಳಿಯೆ ಕೃತಾರ್ಥನು || —(ವ್ಯ. ೧೬)

ನೀತಿಶಾಸ್ತ್ರಕಾರನು ಹೇಳಿರುವದೇನೆಂದರೆ—

ಶ್ಲೋ|| ಯಥಾ ಚಿತ್ತಂ ತಥಾ ವಾಚೋ ; ಯಥಾ ವಾಚಸ್ತಥಾ ಕ್ರಿಯಾಃ ; ಚಿತ್ತೇ ವಾಚಿ ಕ್ರಿಯಾಯಾಂ ಚ ಸಾಧೂನಾಮೇಕರೂಪತಾ || —(ಸು)

ಅ|| ಮನಸ್ಸಿನಲ್ಲಿದ್ದಂತೆ ನುಡಿ. ನುಡಿಯಂತೆ ನಡೆ. ಮನಸ್ಸು, ನುಡಿ, ನಡೆ—ಈ ಮೂರರಲ್ಲಿಯೂ ಸಾಧುಗಳು ಒಂದೇ ಬಗೆಯಾಗಿರುವರು.

ಮುಂದೇನಾಯಿತೆಂದರೆ—

ಕೀ|| ಇದಿರುವಮಾತನಾಡುವೆಯ ? ಎಂದು ಮುನಿ | ಯೊಡೆಯ ನೃಪನು ಕಾಲೊತ್ತುತ್ತ || ಸದಯನಾಗು; ಪಿನಗೀವೆ ಧರೆಯನೆನೆ | ಒದ ತಾ ಕೊಂಡನು ಮುನಿನಾಥ ||

ಒಡನೆ ವಿಶ್ವಾಮಿತ್ರನು ತಾನೆ ರಥವನ್ನು ಹತ್ತಿ ಹರಿಶ್ಚಂದ್ರದಂಪತಿಗಳನ್ನು ಹಿಂದೆ ನಡೆಸಿಕೊಂಡು ಬರುತ್ತಿದ್ದದ್ದು—

ವಾ|| ಉಡುಗಣದ ನಡುವಣಿಂದುವ ತೆಗೆಸಿ ರಾಹು ಬಂ| ದೆಡೆಗೊಂಬ ತೆರನಾದುದಾರಣ್ಯದೊಳು ಮೃಗನ | ಗಡಣದಿಂದಿಪ್ಪ ಹರಿಯನು ತೆಗೆಸಿ ನರಿ ಸುಖಾವಾಸವನು ಕೈಕೊಂಬವೊಲ್; || ಕಡಲವಾರಿಯೊಳು ಬಿಂಬಿಸುವ ರವಿಯಂ ಮುಗಿ | ಲ್ವಡೆ ಮುಸಗುವಂತೆ ವಿಶ್ವಾಮಿತ್ರಮುನಿವರಂ | ಪೊಡವೀಶನಂ ಮುಸುಕಿಕೊಂಡು ಕೌಶಿಕ ರಥವನೇರಿ ಒರಲಿಂತೊಪ್ಪಿತು || —(ಹ. ಕಾ.)

ಈ ಪ್ರಕಾರ ಬಂದು ವಿಶ್ವಾಮಿತ್ರನು ರಾಜ್ಯಭಾರವನ್ನು ಕೈಗೊಳ್ಳುತ್ತಲೆ ತನಗೆ ಹಗುರವಾಯಿತೆಂದು ಹರಿಶ್ಚಂದ್ರನು ಸಂತೋಷಗೊಂಡದ್ದು—

ಕಂ|| ಮನದೊಳಡಾವುದ ನಾಂ ಬಿ|ರ್ರನೆ ಬೀಳ್ವ ಸಿಡಿಲ್ಗೆ ಸಾಟಿಯೆಂದೆಣಿಸಿದೆನಾ || ಮುನಿಯ ಮುನಿಸೆನ್ನ ಮುಡಿಯೊಳ್ | ನನೆಮಲ್ಲಿಗೆಮಾಲೆಯೆನಿಸಿ ಬೀಳ್ದುದು ನೃಪಂ || —(ಚಂ ಕೌ. ನಾ)

ಆಮೇಲೇನಾಯಿತೆಂದರೆ—

ಸಾಂ|| ಧರೆಯ ಕೊಟ್ಟುದಕೆ ದಕ್ಷಿಣೆಯ ಕೇಳಲು ಮುನಿ | ಪಿರಿದಾಗಿ ಚಿಂತಿಸಿ ನೃಪನು || ನೆರಗೊಡ್ಡುತೊಂದು ತಿಂಗಳ ಗಡುವನು ಪಡೆ| ದಿರದೆ ಸಂತಸಪ ತಾಳಿದನು ||

ಹರಿಶ್ಚಂದ್ರನಿಗೆ ಆ ದಕ್ಷಿಣಾದ್ರವ್ಯವು ದೊರೆಯುಗೊಡದಂತೆ—

ಸಾ|| ಇರಬೇಡೆನ್ನೂರೊಳಗೆಂದಾ ಮುನಿ | ಹೊರಡಿಸುತಾ ನೃಪನನ್ನು ||
ಇರದೆ ಕಳುಹಿಸಿದನು ಹಿಂದೆಯೆ ಹಣವನು | ತರೆ ನಕ್ಷತ್ರಕನನು ||

ಹರಿಶ್ಚಂದ್ರನು ತನ್ನ ಹೆಂಡತಿಯಾದ ಚಂದ್ರಮತಿಯನ್ನೂ ಮಗನಾದ ರೋಹಿತಾಶ್ವನನ್ನೂ ಕರೆದುಕೊಂಡು ಕಾಡಿಗೆ ಹೊರಟದ್ದನ್ನು ನೋಡಿ ಜನರು ಮರುಗಿದ್ದು-

ಭೂಪಾಳಿ—ರೂಪಕ

ಅರಸು ಹೋಗುತಿರುವನಲ್ಲ! | ಇರುವೆವೆಂತೊ ಕಾಣೆವಲ್ಲ! || ಪ || ಪರಮಧರ್ಮಮೂರ್ತಿಯೆಮ್ಮ | ಪುರವ ಬಿಟ್ಟು ತೊಲಗುತಲ್ಲ! || ಅ ಪ || ಅರಿತು ನೋಡಲೆಮ್ಮ ಧರ್ಮ | ಶರಧಿಯಿಂದು ದುರ್ದೈವದಿ || ಪುರುಷರೂಪಾಗಿ ವನಕೆ | ಹರಿದು ಹೋಗುತಿರುವದಲ್ಲ! || ೧ || ಜನುಮಜನುಮದಿಂದ ನಮ್ಮ | ನನುಸರಿಸಿದ ಭಾಗ್ಯವಿಂದು || ಅನಿಮಿತ್ತವಾಗಿ ತಾನೆ | ವನದ ದಾರಿಯ ಹಿಡಿಯಿತಲ್ಲ! || ೨ || ನೋಡಲೆಮ್ಮ ಭೂದೇವಿಯು | ಗಾಢವಾದ ವೈಭವವೇ || ಪಾಡಳಿದಜ್ಞಾತವಾಸಕೆ | ಕಾಡ ಸೇರಲಿರ್ಪುದಲ್ಲ! || ೩ ||

ಹರಿಶ್ಚಂದ್ರನು ದಾರಿಯನ್ನು ನಡೆಯುತ್ತ ದಕ್ಷಿಣಾದ್ರವ್ಯದ ಚಿಂತೆಯನ್ನು ಮನಸ್ಸಿಗೆ ಹಚ್ಚಿಕೊಂಡಿರುವಾಗ ಆಕಾಶವಾಣಿಯಾದದ್ದು—

ಕಂ|| ಹಿಂದೆ ಗಳಿಸಿದುದು ಪೋದುದು; | ಮುಂದಕ್ಕಿನ್ನೇನೆಂದು ಚಿಂತಿಸಲೇಕೈ? || ಅಂದಂದು ಸೇರುಬಾವಿಗೆ | ತಂದುದಕವನೆರೆದರುಂಟೆ? ಸುಗುಣಾಕರಣ || —(ಸು)

ದಾರಿಯಲ್ಲಿ ನಕ್ಷತ್ರಕನು ಕೊಟ್ಟತೊಂದರೆ—

ಕು|| ಮಗನನಿಳಿಸೆನ್ನನೇ | ಹೆಗಲೊಳಿರಿಸೆನ್ನುವನು; | ಮಿಗೆ ಹಸಿವು ನೀರಡಿಕೆಯೆಂದಳುವನು; || ಹಗಲಿನಾಯಾಸವನು | ಬಗೆಯುತ್ತ ಮಲಗಿದರೆ | ಸೊಗಸಾಗಿ ಕಾಲನೊತ್ತೆನ್ನುತಿಹನು ||

ಕಾಶಿಯು ಇನ್ನು ಸ್ವಲ್ಪದೂರದಲ್ಲಿರುವಾಗ ಇವರ ದಾರಿಗೆ ಅಡ್ಡವಾಗಿ ವಿಶ್ವಾಮಿತ್ರನು ಕಳುಹಿಸಿದ ಕಾಳ್ಗಿಚ್ಚನ್ನು ನೋಡಿ ಹರಿಶ್ಚಂದ್ರನು ಮುಂಗಾಣದಿರಲು ಚಂದ್ರಮತಿಯು ಸೊಂಟಕ್ಕೆ ಸೆರಗನ್ನು ಕಟ್ಟಿ ಮುಂದೆ ಬಂದು—

ವಾ|| ಪೊಡವೀಶ ಕೇಳುಭಯಕುಲಶುದ್ಧಿಯಿಲ್ಲದಿ | ರ್ದೊಡೆ, ನಿನ್ನನಲ್ಲದನ್ಯನನು ಲೆಕ್ಕಿಸಿದೆನಾ | ದೊಡೆ, ಹಿಂದೆ ನಿನಗೊಂದನಿಕ್ಕಿ ನಾನೊಂದನುಂಡೊಡೆ ಮೂರುಕರಣವರಿಯೆ || ಮೃಡನಲ್ಲದನ್ಯ ದೈವಕ್ಕೆ ನಮಿಸಿದೊಡೆನ್ನ | ಹೊಡೆದು ಮುಕ್ಕುವದು ದಾವಾಗ್ನಿ; ಮೇಣಲ್ಲದಿ | ರ್ದೊಡೆ ಬಟ್ಟೆಗೊಟ್ಟಪುದು; ಕೇಳೆಂದು ಬೊಬ್ಬೆಗುಡುವಾ ಪೊಳ್ತನೇವೊಗಳ್ವೆನು || —(ಹ. ಕಾ)

ಆಗ ಕಾಳ್ಗಿಚ್ಚು ಹಿಮ್ಮೆಟ್ಟಲು ಹರಿಶ್ಚಂದ್ರನು ಕಾಶಿಯನ್ನು ಸೇರಿದೊಡನೆ ನಕ್ಷತ್ರಕನು ಹಣಕ್ಕಾಗಿ—

ಭೋ|| ನೃಪನ ನಿಲಿಸೆ ಬಿಸಿಲೊಳರಸಿ | ತಪಿಸಿ ಮರೆಯುಗೈದಳವನ; | ಕೃಪೆಯು ತೊರೆದು ತಲೆಯು ಮೇಲೆ ಕಲ್ಲ ಹೇರಲು || ಶಪಿಸದವನಸತ್ಯಳಾಕೆ; | ನೃಪನು ಮುಂದುಗಾಣದಿರಲು | ತ್ರಪೆಯು ಬಿಟ್ಟು ಸತಿಯ ಮಾರಿಕೊಡುವ ದೆಂದನು ||

ಇಷ್ಟಾದರೂ ಹರಿಶ್ಚಂದ್ರನು ಅಸಮಾಧಾನವನ್ನು ಹೊಂದಲಿಲ್ಲ.

ಸಾಂ|| ಕರಗಿಸೆ, ಕಾಸೆಯೊರೆಯೆ, ತೇಯೆ, ನವನೀತ | ವರದುಗ್ಧ ಕನಕ ಮಲಯಜ || ಕರಮೆಸೆವಂತೆ ದುರ್ಜನರ ಬಾಧೆಗೆ ಸ | ತ್ಪುರುಷರು ಗುಣವ ಮೆರೆವರು || —(ಚಂ. ಪ್ರ. ಚ)

ಆ ಮಾತನ್ನು ಕೇಳಿ ಹರಿಶ್ಚಂದ್ರನು ತನ್ನಲ್ಲಿ ತಾನು ನೊಂದುಕೊಂಡದ್ದು—

ಕಂ|| ಋಣಮೆ ಮನುಜರ್ಗೆ ಭಯಕಾ | ರಣಮಿಹಪರಗಳೊಳಮುಕಟ! ಪರಿಣತಿಘೋರಂ; || ಪಣಮುಳ್ಳನ ಕೆರಳ್ದಾಸ್ಯಮ | ನಣಮಾಲೋಕಿಸದ ನರನೆ ಧನ್ಯಂ ಜಗದೊಳ್ || —(ಚಂ. ಕೌ. ನಾ)

ಆಗ ಅವನು ತನ್ನ ಮನಸ್ಸಿನಲ್ಲಿ ದೇವರಿಗೆ ಶರಣು ಹೋದದ್ದು—

ಮಾರವಿ—ಝಂಪೆ

ಋಣವೆಂಬೊ ಸೂತಕವು ಬಾಧಿಸುತಿದೆ || ಪ || ಗುಣನಿಧಿಯೆ ನೀ ಎನ್ನ. ಋಣವ ಪರಿಹರಿಸೊ || ಅ ಪ || ಕೊಟ್ಟ ಧನಿಕರು ಬಂದು ನಿಷ್ಠುರದ ಮಾತಾಡಿ | ಕೆಟ್ಟ ಬಯ್ಗುಳ ತನ್ನ ಮನದಣಿಯಲು; || ದಿಟ್ಟತನದಿಂದ ಕಿವಿಗೊಟ್ಟು ಕೇಳಿದೆನಯ್ಯ; | ಸೃಷ್ಟಿಗೊಡೆಯನೆ ನೋಡಿ ಕಷ್ಟ ಪರಿಹರಿಸೊ || ೧ || ಆಳಿದೊಡೆಯನ ಮಾತು ಕೇಳಿ ನುಡಿಯಲುಬಹುದು; | ಊಳಿಗವ ಮಾಡಿ ಮನದಣಿಯಬಹುದು; || ಕಾಳಗದಿ ಪೊಕ್ಕು ಕಡಿದಾಡಿ ಜಯಿಸಲುಬಹುದು ; | ಪೇಳಲಳವಲ್ಲ ಋಣದವಗೊಂದು ಸೊಲ್ಲ || ೨ || ಹೆತ್ತ ಸೂತಕ ಹತ್ತು ದಿನಗಳಿಗೆ ಪರಿಹಾರ; | ಮೃತ್ಯುಸೂಚಕವು ಹನ್ನೊಂದು ದಿನಕೆ; || ಮತ್ತೆ ಋಣಸೂತಕವು ಜನ್ಮಜನ್ಮಾಂತರಕೆ; | ಎತ್ತೆತ್ತಹೋದರೂ ಬೆನ್ನ ಹತ್ತಿಹುದು || ೩ || ಬಂಧು ಬಳಗದ ಮುಂದೆ ಬಹುಮಾನವು ಹೋಗಿ | ಅಂದು ಬಾಳಿದೆನೊ ಈ ವಿಧ ಋಣದೊಳು; || ಇಂದಿರಾರಮಣ ಸಿರಿಪುರಂದರವಿಠಲನೆ, | ಬಂದೆನ್ನ ಋಣವನ್ನು ಪರಿಹರಿಸೊ ಹರಿಯೆ || ೪ || —(ದಾ)

ಕೊಡುವದಕ್ಕೆ ಹಣವಿಲ್ಲವೆಂದು ಹೇಳಿಬಿಟ್ಟರೆ ಹೋಗಿಬಿಡುತ್ತೇನೆಂದು ನಕ್ಷತ್ರಕನೆಂದ ಮಾತಿಗೆ ಹರಿಶ್ಚಂದ್ರನು ಹೇಳಿದ್ದು—

ತ್ರಿ|| ಅಡಿ ಹುಸಿಯಲು ಹೊಲ್ಲ; ಕೂಡಿ ತಪ್ಪಲು ಹೊಲ್ಲ; | ಕಾಡುವ ನೆಂಟ ಬರೆ ಹೊಲ್ಲ; ಸಟೆಯ ತಾ | ನಾಡುವದೆ ಹೊಲ್ಲ ಸರ್ವಜ್ಞ || —(ಸ. ಪ)

ಈ ಸಮಯದಲ್ಲಿ ಸುಳ್ಳಾಡಿದರೆ ದೋಷವಿಲ್ಲವೆಂದು ನಕ್ಷತ್ರಕನು ಶಿಷ್ಟಸಮ್ಮತಿಯನ್ನು ತೋರಿಸಿದ್ದು—

ಶ್ಲೋ॥ ವಿವಾಹಕಾಲೇ, ಋತುಸಂಪ್ರಯೋಗೇ, । ಪ್ರಾಣಾತ್ಯಯೇ, ಸರ್ವಧನಾಪಹಾರೇ, ॥ ವಿಪ್ರಸ್ಯ ಚಾರ್ಥೇಽಪ್ಯನೃತಂ ವದೇಯುಃ ಪಂಚಾನೃತಾನ್ಯಾಹುರಪಾತಕಾನಿ ॥ —(ಸು)

ಅ॥ ಮದುವೆಯ ಸಮಯದಲ್ಲಿ, ಋತುವೆಂಬ ಗುಂಪಿನಯಾಗವನ್ನು ಮಾಡುವಾಗ, ಪ್ರಾಣವು ಹೋಗುವಾಗ, ತನ್ನದೆಲ್ಲವೂ ನಾಶವಾದಾಗ, ಬ್ರಾಹ್ಮಣನನ್ನುಳಿಸಬೇಕಾದಾಗ–ಸುಳ್ಳು ಹೇಳುವದುಂಟು. ಈ ಐದು ಸುಳ್ಳುಗಳಿಂದ ದೋಷವಿಲ್ಲವೆಂದು ಹೇಳುತ್ತಾರೆ.

ಅದಕ್ಕೆ ಹರಿಶ್ಚಂದ್ರನ ಉತ್ತರ—

ಶ್ಲೋ॥ ಯಶೋ ಯಸ್ಮಾದ್ಭಸ್ಮೀಭವತಿ ವನವಹ್ನೇರಿವ ವನಂ; । ನಿದಾನಂ ದುಃಖಾನಾಂ ಯದವನಿರುಹಾಣಾಮಿವ ಜಲಂ; ॥ ನ ಯತ್ರ ಸ್ಯಾಚ್ಛಾಯಾತಪ ಇವ ತಪಃಸಂಯಮಕಥಾ; । ಕಥಂಚಿತ್ತನ್ಮಿಥ್ಯಾವಚನಮಭಿಧತ್ತೇ ನ ಮತಿಮಾನ್ ॥ —(ಸು)

ಅ॥ ಕಾಳ್ಗಿಚ್ಚಿನಿಂದ ಕಾಡು ಹೇಗೊ ಹಾಗೆ ಯಾವದರಿಂದ ಕೀರ್ತಿಯೆಲ್ಲ ಸುಟ್ಟುಬೂದಿಯಾಗುವದೊ, ಮರಗಳಿಗೆ ನೀರು ಹೇಗೊ ಹಾಗೆ ಯಾವದು ದುಃಖಗಳಿಗೆಲ್ಲ ಮೂಲಕಾರಣವಾಗಿರುವದೊ, ಬಿಸಿಲಲ್ಲಿ ನೆರಳು ಹೇಗಿರುವದಿಲ್ಲವೊ ಹಾಗೆ ಯಾವದಿರುವಕಡೆ ತಪಸ್ಸು, ಮನೋನಿಗ್ರಹ-ಮೊದಲಾದವುಗಳ ಮಾತಿರುವದಿಲ್ಲವೊ ಅಂಥ ಸುಳ್ಳುಮಾತನ್ನು ಬುದ್ಧಿಶಾಲಿಗಳೆಂದೂ ಆಡಬಾರದು.

ಮುನಿಪುತ್ರನ ಮಾತಿನಂತೆ ತನ್ನನ್ನು ಮಾರೆಂದು ಚಂದ್ರಮತಿ ಹೇಳುವದು—

ದಿ॥ ಆಡಿ ಬೂಟಂ ನೀನೆನ್ನ ಕಳೆವುದಿಲ್ಲ; । ಬೇಡಿ ಮದ್ಭವ ನೀನೆನ್ನ ಕೊಡುವದಿಲ್ಲ; । ಗಾಡಿಕಾತಿಯರೊಳ್ ಬೆರೆಯೆ ತೊರೆವುದಿಲ್ಲ; । ನೀಡುವೈ ಧನವಂ ಮುನಿಗಯೋಗ್ಯವಲ್ಲ ॥

ಉಪಾಯಾಂತರವಿಲ್ಲದೆ ಹೆಂಡತಿಯನ್ನು ಮಾರುತ್ತೇನೆಂದು ಬೀದಿಯಲ್ಲಿ ಸಾರಿದ್ದು—

ಆನಂದಭೈರವಿ–ಆದಿತಾಳ

ಕೊಂಡುಕೊಳ್ಳುವುದೀಗ । ಈಕೆಯ ॥ ಕೊಂಡುಕೊಳ್ಳುವುದೀಗ ॥ ಪ ॥ ಕೊಂಡುಕೊಳ್ಳಿರೀ । ಎನ್ನಯ ಧರ್ಮದ । ಹೆಂಡತಿಯನು ನಿಮ್ಮಯ ಮನೆಗೆಲಸಕೆ ॥ ಅ. ಪ ॥ ಹೇಳಿದ ಕೆಲಸವ । ತಾಳಿಮೆಯಿಂದಲಿ ॥ ಕಾಲದಿ ಮಾಡುವ । ಶೀಲದ ನಾರಿಯ ॥ ೧ ॥ ಹಂಗಳೆಸವ ಕೆಲ । ಸಂಗಳೆಲ್ಲವನು ॥ ತಾಂ ಗೆಯ್ಯಲು ಬಲ್ಲಂಗನಾಮಣಿಯ ॥ ೨ ॥ ಧರ್ಮವೆ ತನ್ನಯ । ಪೇರ್ಮೆಯೆಂದರಿತು ॥ ಕರ್ಮವನೆಸಗುವ । ಮರ್ಮವ ಬಲ್ಲಳ ॥ ೩ ॥

ಆಗ ಕಾಲಕೌಶಿಕನೆಂಬ ಬ್ರಾಹ್ಮಣನು ಬಂದು ಆ ದಕ್ಷಿಣಾದ್ರವ್ಯವನ್ನೆಲ್ಲ ಕೊಟ್ಟು ಚಂದ್ರಮತಿಯನ್ನು ಕೊಂಡುಕೊಳ್ಳಲು ಆಕೆ ಅಗಲುವಾಗ ಪತಿಗೆ ನಮಸ್ಕರಿಸಿ ಹೇಳಿದ್ದು—

ಕಂ॥ ಸಾಧುಗಳ ಸತ್ಕರಿಸಿ । ಸಾಧುಕರ್ಮವ ಮಾಡು । ತಾದಿತೇಯರ ಪೂಜೆಗೈದಿದ್ದರೆ ॥ ಮೇದಿನಿಯೊಳಗೆ ಮುಂದ । ಕಾದೊಡಂ ನೀನೆ ಸ । ವ್ಮೋದದಿಂದೆನಗೆ ಪತಿಯಪ್ಪುದೆಂದುಂ ॥

ಹೀಗೆ ಹೇಳಿ ಮಗನನ್ನು ಕರೆದುಕೊಂಡು ದುಃಖಿಸುತ್ತ ಆಕೆ ಹೊರಡಲು ಇತ್ತ ಹರಿಶ್ಚಂದ್ರನು ವಿರಕ್ತಭಾವವನ್ನು ಹೊಂದಿದ್ದು—

ವೃ|| ಸ್ತ್ರೀಯುಂ ಮಕ್ಕಳನೆಂತಗಲ್ವೆ ಸಿವಗಾರುಂಟೆಂದು ಗೋಳಿಟ್ಟು ಕ | ಣ್ಣಾಯುಂ ಬಿಟ್ಟಳಿವಂ ಬಳಿಕ್ಕುದಯಿಪಂ ತಾನಲ್ತೆ ಬೇರಸ್ಥರೊಳ್; || ಪ್ರಾಯುಂ ದಾಳ್ದು ವಿವಾಹವಾಗಿ ಸುತರಂ ಮುದ್ದಾಡುವಂ ಮುನ್ನಿನಾ | ಸ್ತ್ರೀಯುಂ ಮಕ್ಕಳನಾಗಳೇಕೆ ನೆನೆಯುಂ? ರತ್ನಾಕರಾಧೀಶ್ವರಾ || —(ರ. ಶ)

ಅತ್ತ ಆ ಬ್ರಾಹ್ಮಣನು ಚಂದ್ರಮತಿಯ ಕೈಗೆ ಹಗ್ಗವನ್ನು ಕಟ್ಟಿ ಎಳೆದುಕೊಂಡುಹೋಗಿ ತನ್ನ ಹೆಂಡತಿಗೆ ದಾಸಿಯನ್ನಾಗಿ ಮಾಡಿದಾಗ ಹರಿಶ್ಚಂದ್ರನ ವಿಷಯದಲ್ಲಿ ಜನರು ಆಡಿಕೊಂಡದ್ದು—

ಕಂ|| ಅರಸಿಯನಾಗಿಸಿದಿಪಳಂ | ಪರಗೃಹಪರಿಚಾರಿಕೆಯನೊಡರ್ಚಿದ ನಿಸಗೇ || ನೊರೆವೆಂ? ಬೈತಲೆಮಣಿಯುಂ | ಚರಣಕ್ಕಾಭರಣಮೆಸಗಿದಂತಾಯ್ತಲ್ತೇ ! || —(ಚಂ. ಕೌ. ನಾ)

ಚಂದ್ರಮತಿಯು ಅಲ್ಲಿ ಬಹು ಕಷ್ಟದಿಂದ ಕಾಲವನ್ನು ಕಳೆಯಬೇಕಾಗಿತ್ತು. ಏಕೆಂದರೆ ಸೇವಾವೃತ್ತಿಯೇ ಅಂಥದ್ದು—

ಶ್ಲೋ || ಮೌನಾನ್ಮೂಕಃ, ಪ್ರವಚನಪಟುರ್ವಾತುಲೋ ಜಲ್ಪಕೋ ವಾ, | ಧೃಷ್ಟಃ ಪಾರ್ಶ್ವೇ ವಸತಿ ಚ ಸದಾ, ದೂರತಸ್ತ್ವಪ್ರಗಲ್ಭಃ, || ಕ್ಷಾಂತ್ಯಾ ಭೀರುರ್ಯದಿ ನ ಸಹತೇ ಪ್ರಾಯಶೋ ನಾಭಿಜಾತಃ, | ಸೇವಾಧರ್ಮಃ ಪರಮಗಹನೋ ಯೋಗಿನಾಮಪ್ಯಗಮ್ಯಃ || —(ಸು)

ತ|| ಸುಮ್ಮಗಿದ್ದರೆ ಮೂಕನೆನ್ನುವರು. ಚೆನ್ನಾಗಿ ಮಾತಾಡಿದರೆ ಬಾಯಿಬಡಿಕನೆನ್ನುವರು. ಹತ್ತಿರದಲ್ಲಿ ನಿಂತರೆ ದಿಟ್ಟನೆನ್ನುವರು. ದೂರದಲ್ಲಿ ನಿಂತರೆ ಮುಂದಾಳಲ್ಲವೆನ್ನುವರು. ಸಹನೆಯನ್ನು ತೋರಿಸಿದರೆ ಹೇಡಿಯೆನ್ನುವರು. ಸಹನೆಯನ್ನು ತೋರಿಸದಿದ್ದರೆ ಒಳ್ಳೆ ಮನೆತನದವನಲ್ಲವೆನ್ನುವರು. ಸೇವೆಯು ಬಹು ಕಷ್ಟ. ದೊಡ್ಡ ಯೋಗಿಗಳಿಗೂ ಕೂಡ ಸಾಧ್ಯವಲ್ಲ.

ಇದರ ಮೇಲೆ ಪರರ ಮನೆಯ ವಾಸವೆಂಬುದೇ ಕಷ್ಟ—

ಶ್ಲೋ|| ಶಿರಸಾ ಧಾರ್ಯಮಾಣೋಽಪಿ ಸೋಮಃ ಸೌಮ್ಯೇನ ಶಂಭುನಾ | ತಥಾಪಿ ಕೃಶತಾಂ ಧತ್ತೇ ಕಷ್ಟಃ ಖಲು ಪರಾಶ್ರಯಃ || —(ಸು)

ಅ|| ಶಾಂತನಾದ ಈಶ್ವರನು ಚಂದ್ರನನ್ನು ತಲೆಯಮೇಲಿಟ್ಟುಕೊಂಡಿದ್ದರೂ ಅವನು ಬಡವಾಗುವನು. ಮತ್ತೊಬ್ಬರ ಆಶ್ರಯವೇ ಕಷ್ಟ.

ಹೀಗಿರುವಾಗ ಕಾಲಕೌಶಿಕನು ರೋಹಿತಾಶ್ವನಿಗೆ ಕೂಡ ದರ್ಭೆ ಮೊದಲಾದುವುಗಳನ್ನು ತರುವ ಕೆಲಸವನ್ನು ಹೇಳಿ ತೊಂದರೆಪಡಿಸುತ್ತಿರಲು ಇತ್ತ ನಕ್ಷತ್ರಕನು—

ಸಾ|| ಇಷ್ಟುದಿನದ ತಡಕಾಗಿಹ ಬಡ್ಡಿಯ | ಕೊಟ್ಟೆರಡನೆ ಮಾತಾಡು; ||
ನೆಟ್ಟನೆ ನಿನ್ನನು ಮಾರಿಕೊಂಡಾದರೂ ಕೊಟ್ಟಲ್ಲದೆ ಬಿಡೆ ನೋಡು ||

ಎಂದು ಅವನನ್ನು ಹಗ್ಗದಿಂದ ಕಟ್ಟಿ ಎಳೆದಾಗ ಅವನು ಶಿವನಿಗೆ ಮೊರೆಹೊಕ್ಕದ್ದು—

ಮುಖಾರಿ—ಝಂಪೆ

ಏಕೆ ದಯವನು ಮಾಡೆ? ಹೇ, ಸಾಂಬಶಿವನೇ ॥ ಪ ॥ ಲೋಕರಕ್ಷಕನೆಂಬ ಬಿರುದ ಪೊಗಳಿಸಿಕೊಂಡು ॥ ಅ ಪ ॥ ವಾಸವೇ ಕೈಲಾಸ; ವಸನವೇ ಗಜಚರ್ಮ; | ವಾಸುದೇವನೆ ಮಿತ್ರ; ವಧುವೆ ಗಿರಿಜೆ; ॥ ವಾಸುಕಿಯೆ ಆಭರಣ; ವಸುಧೆಯೇ ರಥವೆಂಬ | ಈಸು ಗರ್ವದೊಳೆನ್ನ ಮರೆತೆಯೊ? ಮಹಾದೇವ ॥ ೧ ॥ ಸಾರಥಿಯು ಬ್ರಹ್ಮ; ಮಹಮೇರುವೇ ಧನುವಿದಕೆ | ನಾರಾಯಣಾಸ್ತ್ರ; ನಾಗೇಂದ್ರ ಸೂತ್ರ; ॥ ಈರೀತಿಯಲಿ ಮೂರುಪುರವ ಜಯಿಸಿರ್ಪಹಂ | ಕಾರದಿಂದೆನ್ನ ಮರೆತೆಯೊ? ಮಹಾದೇವ ॥ ೨ ॥ ಬಡವನೊಡನೇಕಿಸಿತು ಕಡುಹ ತೋರಿದೆ? ಶಿವನೆ, | ಬಿಡದೆನ್ನ ಕಾಯೊ; ಮನದಿಷ್ಟವೀಯೊ; ॥ ಮೃಡನು ನೀನಲ್ಲದಿನ್ನಾರುಂಟು? ಈ ಜಗಕೆ | ರಜತಪುರವಾಸ, ಶ್ರೀ ಚಂದ್ರಮೌಳೀಶ ॥ ೩ ॥—

ಆಗ ಈಶ್ವರನು ವೀರಬಾಹುವೆಂಬ ಹೊಲೆಯನ ಹೃದಯದಲ್ಲಿ ಹೊಕ್ಕು ಅವನನ್ನು ಕೊಂಡುಕೊಳ್ಳುವದಕ್ಕೆ ಬರುತ್ತಾನೆ—

ವಾ॥ ಹಿಡಿದ ಸಿಂಬುಳಿಗೋಲ, ಕಾರೊಡಲ, ಕೆಂಗಣ್ಣ, | ಕುಡಿದು ಕೊಬ್ಬಿದ ಬಸಿರ, ದಡದಡಿಸಿ ತರಹರಿಸು | ವಡಿಯ, ಕೆದರಿದ ತಲೆಯ ನಡಸಿ ಸುತ್ತಿರ್ದ ಮುಪ್ಪುರಿ ಬಾರಿ ಕಟ್ಟಣಿಗೆಯ, ॥ ಬಿಡದೆ ಘುರ್ರನೆ ತೇಗಿ ನೆರಪಿಯಂ ಭುಯ್ಯಬಿರು | ನುಡಿಯ, ಕಲಿವೀರಬಾಹುಕ ಬರುತ್ತಿರೆ ಮೂರು | ಪೊಡೆಗೊಂಡು ಹೊಂಗೊಡುವೆ ನಾನೆಂದು ತನ್ನ ಹಡಬಗನಿಂದ ಕೇಳಿಸಿದನು ॥—(ಹ.ಕಾ)

ಟಿ॥ ಹಡಬಗ—ಎಲೆಅಡಿಕೆಯ ಚೀಲವನ್ನು ಹಿಡಿದಿರುವವನು.

ಅದಕ್ಕೆ ಹರಿಶ್ಚಂದ್ರನು ಹೇಳಿದ್ದು—

ಶ॥ ನಾಲಕುವರ್ಣದ | ಮೇಲಹ ಜಾತಿಯ | ಶೀಲದವರು ಕೊಳ್ಳಲುಬಹುದು; ॥ ಕೀಳಹ ಹೊಲೆಯನಿಗಾಳಾಗುವದನು | ತಾಳಬಹುದೆ? ನೀಂ ಯೋಚಿಪುದು ॥

ಅದಕ್ಕೆ ವೀರಬಾಹುವಿನ ಉತ್ತರ—

ಸಾಂ॥ ಹೊಲೆಯಿಂದ ಜನಿಸಿದ ಮಾನವರಲ್ಲದೆ | ಹೊಲೆಯಿಲ್ಲದಾರು ಹುಟ್ಟಿದರು? ॥ ಹೊಲಸಿನೊಳಗೆ ನವಮಾಸ ಬೆಳೆದು ಬಂದು | ಕುಲಕೆ ಹಾರುವರೆ ಬಲ್ಲವರು? ॥ —(ಹ. ಸಾಂ)

ಆಗ ಬೇರೆ ದಾರಿ ತೋರದೆ ಹರಿಶ್ಚಂದ್ರನು ಅವನಿಗೆ ತನ್ನ ಬೆಲೆಯನ್ನು ಹೇಳಿದ್ದು—

ಸಾಂ॥ ಆನೆಯ ಮೇಲಿದ್ದು ಚಿಮ್ಮಲು ಕವಡೆಯು | ತಾನೆಷ್ಟು ಮೇಲೆ ಹೋಗುವದೊ ॥ ಮಾಣದೆ ಹಣದ ರಾಶಿಯನಷ್ಟು ಕೊಟ್ಟರೆ | ನಾನವರಾಳಾಗುವೆನು ॥

ವೀರಬಾಹು ಒಡನೆ ಅಷ್ಟು ಹಣವನ್ನು ಸುರಿದನು. ಅದನ್ನು ಹರಿಶ್ಚಂದ್ರನು ನಕ್ಷತ್ರಕನಿಗೆ ಕೊಟ್ಟನು. ಆಗ ಆದ ಆಕಾಶವಾಣಿ—

ಕಂ|| ಅದ್ಭುತಮಪ್ಪುದಾನಂ! ಮೇ । ಣದ್ಭುತಮಿಾ ಕ್ಷಾಂತಿ! ಧೈರ್ಯ ಸೌಶೀಲ್ಯಂ! ತಾ || ನದ್ಭುತಮಿಾ ಜ್ಞಾನಸಮುಂಮ । ತ್ಯದ್ಭುತಮಿಾ ಸತ್ಯಮುಲ್ತೆ! ಭೂಪೋತ್ತಮನಾ || —(ಚಂ. ಕಾ. ನಾ)

ಆಗ ಸ್ಮಶಾನದ ಕಾಣಿಕೆಯನ್ನೂ ಶವದ ವಸ್ತ್ರವನ್ನೂ ತೆಗೆದುಕೊಂಡು ಪಶ್ಚಿಮಶ್ಮಶಾನದಲ್ಲಿ ರುವಂತೆ ವೀರಬಾಹುವಿನ ಅಪ್ಪಣೆಯನ್ನು ಪಡೆದು ಹರಿಶ್ಚಂದ್ರನು ಅಲ್ಲಿಗೆ ಬಂದಾಗ—

ವೃ|| ಸುರಿಗುಮುದೊಂದರಿಂ ರುಧಿರಪೂರಿತಪಾತ್ರಮನೀಳ್ದುಕೊಂಡದೊಂ। ದುರೆ ಪೆರತೊಂದು ದೀಪ್ತರಸನಂ ನೊಣೆಗುಂ ಮೊಗದಿಂದಮೊಕ್ಕುದಂ; || ತಿರೆಯೊಳಗೊಕ್ಕ ಶೋಣಿತಕಣಂಗಳನಾಕ್ಷಣಮಂತದೊಂದು ಸೀ । ಳ್ದಿರೆ ರಸ ನಾಂಚಲಂ ನಸಿಗುಮಾಸೆಯಿಂಗಲ್ ವಲಮುಚ್ಚಕಂಧರಂ || —(ಚಂ. ಕಾ. ನಾ)

ಟಿ|| ಈಳ್ದುಕೊಂಡು—ಸೆಳೆದುಕೊಂಡು. ನೊಣೆಗುಂ—ನುಂಗುವದು. ಒಕ್ಕುದಂ—ಚೆಲ್ಲಿ ದ್ದನ್ನು. ಉಚ್ಚಕಂಧರಂ— ತಲೀ ಎತ್ತಿಕೊಂಡು.

ಅಲ್ಲಿ ಹರಿಶ್ಚಂದ್ರನಿರುವಾಗ ಅತ್ತ ರೋಹಿತಾಶ್ವನು ದರ್ಭೆ ಮೊದಲಾದುವುಗಳನ್ನು ತರುವದಕ್ಕೆ ಕಾಡಿಗೆ ಹೋಗಿ ಹುತ್ತದ ಮೇಲೆ ಹತ್ತಿ ಎಲೆಯನ್ನು ಕೊಯ್ಯುವಾಗ ಹಾವು ಕಚ್ಚಿ ಸತ್ತ ದ್ದನ್ನು ಕೇಳಿ ಚಂದ್ರಮತಿಯು ರಾತ್ರಿ ಮನೆಯವರ ಊಟವಾದ ಮೇಲೆ ಗೊರವೀಕಟ್ಟಿಗೆಯ ಬೆಳಕಿ ನಲ್ಲಿ ಬಂದು ನೋಡಿದಾಗ—

ವಾ|| ವಿಷದ ಹೊಗೆ ಹೊಯ್ದು ಹಸುರಾದ ಮೈ ಪಾರೆ ನೊರೆ। ಯೊಸರ್ವ ಗಲ್ಲಂ, ಕಂದಿದುಗುರ್ಗಳರೆದೆರೆದಗುರ್ವಿಸುವ ಕಣ್, ಹರಿದು ಮುಲುಹಿಡಿದ ಹರಹಿದ ಕೈಗಳುಂಬ ಹೊತ್ತುಣಿ ಪಡೆಯದೆ || ಹಸಿದು ಬೆಸ್ಪಡರ್ದ ಒಸಿರಕಟ ಕಟ! ಮುರಿದ ಗೋಣ್ । ದೆಸೆಗುರುಳಿ ಹುಡಿ ಹೊಕ್ಕು ಬರತ ಬಾಯ್ದೆರೆಸಂದು। ಬಸವಳಿದ ನಿಜಸುತನ ಕಂಡಳು ಹರಿಶ್ಚಂದ್ರನರಸಿ ಹುತ್ತದ ಮೊದಲೊಳು ||
—(ಹ. ಕಾ)

ಆಗ ಅವಳು ದುಃಖಿಸಿದ್ದು—

ರ|| ಏನೇನೇನೆಲೆಮಗನೇ ಮಗನೇ । ನಾವೇಕಾಯಿತ್ತೆಲೆ ಚೆನ್ನಿಗನೆ । ಇರಿದೆಯಲಾ! ಎನ್ನನು ಸುಕುಮಾರಾ । ಕೊರೆದೆಯಲಾ! ಕೊರಲನು ಜಿತ ಮಾರಾ। ವನಿತೆಯನಾರಡಿಗೊಂಡೆಯೊ ! ವಿಧಿಯೆ। ಎನಗೀಪರಿಯಲಿ ಮುಡಿವುದ ವಧಿಯೇ ?। ಶಿರದಲಿ ಬರೆದಕ್ಕರವೀಪರಿಯೆ ? । ಗರಳದ ಉರಿಯುಲಿ ಒರಗಿದೆ ಕ[illegible] ಯೆ । ಎನುತ ಸುತನ ವದನವ ನೆರೆ ನೋಡಿ । ವನಿತೆ ಮಹಾದುಃಖದೊಳೊಡ ಗೂಡಿ । ಪುತ್ರಶೋಕದುರಿ ಭುಗಿಲೆನೆ ನೆಗೆದು । ಗಾತ್ರವನಡರೆ ಕೊರಲ ನೆ[illegible] ಬಿಗಿದು । ಹೊಟಹೊಟನೊಡೆಯಲು ದುಃಖದಿ ಕಾಯ । ತುಟಿಯೆಂತಂತಲ[illegible] ಗುತ್ತಿರೆ ಬಾಯ । ತೆರೆದೊರಲಿದಳೊರಲಿದಳೀರಂತೆ । ಮೊರೆಯಿಟ್ಟಳು ಹೋ[illegible] ಳಿದಳಾ ಕಾಂತೆ । ಹುಡಿಯಾಗುತ್ತಿರೆ ಹೊರಳಿದಳಂದು । ಕಡುಶೋಕಾನಲನಿ[illegible] ದುರೆ ಬೆಂದು। ಎತ್ತಣ ಬರಸಿಡಿಲೆರಗಿತೊ? ನಿನ್ನ । ಹುತ್ತದ ಹತ್ತಿರಲೊರಗಿ[illegible]

ಚೆನ್ನ | ಆರಿಗೆನ್ನ ನೊಪ್ಪಿಸಿದೆಯೊ? ಕಂದ | ಆರಯ್ಯದೆ ಹೋಹರೆ? ಗುಣ ವೃಂದ ॥ —(ಹ. ಕಾ)

ಕೊನೆಗೆ ಅವಳು ಮಗನನ್ನು ತಂದು ಶ್ಮಶಾನದಲ್ಲಿಟ್ಟು ಸುಡುವ ಯತ್ನವನ್ನು ಮಾಡುತ್ತಿರಲು ದೂರದಿಂದ ಹರಿಶ್ಚಂದ್ರನು ಕೂಗಿ ಹೇಳಿದ್ದು—

ಕಂ॥ ತಿಳಿಸದೆನಗೀವ ಮೃತಕಂ | ಬಲಮಂ ತಾಂ ಕುಡದೆ ಜನಮುದಾರಾ ದೊಡವಿಾ ॥ ಇಳಿಯೊಳ್ಮಶ್ಮಶಾನಯೋಗ್ಯಂ | ಗಳೆನಿಪ ಕಜ್ಜಗಳನುಜ್ಜುಗಿಸದಿರ ವೇಳ್ಕುಂ ॥ —(ಚಂ. ಕೌ. ನಾ)

ಆಮೇಲೆ ಅವನು ಹತ್ತಿರಕ್ಕೆ ಬಂದು ಕಾಣಿಕೆಯನ್ನು ಕೇಳಲು ತಾನು ದಾಸಿಯೆಂದು ಚಂದ್ರಮತಿ ಹೇಳಿದಾಗ ಹರಿಶ್ಚಂದ್ರನು ಹೇಳಿದ್ದು—

ಸಾ॥ ಕೊರಳೊಳಗಿಹ ಮಾಂಗಲ್ಯಸುವರ್ಣವ | ಸೆರೆ ಮಾರುತ ಪಡೆ ಹಣ ವ; ॥ ಸರಿಬರದಿರಲಿದು ನಿನಗೀ ಸ್ಥಲದೊಳ | ಗಿರಿಸದಿರಿಂತೀ ಹೆಣವ ॥

ತನ್ನ ಮಾಂಗಲ್ಯವನ್ನು ಗುರ್ತಿಸುವವನು ಗಂಡನೊಬ್ಬನೇ ಎಂದು ಆಕೆ ಎರಗಿ ನಡೆದ ಸಂಗತಿಯನ್ನೆಲ್ಲ ತಿಳಿಸಲು ಹರಿಶ್ಚಂದ್ರನೂ ದುಃಖಿಸಿ ಮನೆಯಲ್ಲಿ ಕೇಳಿಯಾದರೂ ಕಾಣಿಕೆಯನ್ನು ತರಹೇಳಿ ಅವಳನ್ನು ಊರಿಗೆ ಕಳುಹಿಸಿದನು. ಅವಳು ಬರುವಾಗ ದಾರಿಯಲ್ಲಿ ನಡೆದದ್ದೇನೆಂದರೆ—

ಕಂ॥ ಹುಡುಗನೊಬ್ಬನ ಕೊಲ್ವ | ತುಡುಗರನಂ ನೃಪಪತ್ನಿ | ತಡೆಯಲೊಡನೋಡಿದರು ಭರದೊಳವರು; ॥ ಒಡನೆ ದೂತರು ಬಂದು | ತುಡುಗಿ ನೀನೇ ಎಂದು | ಕಡುಹಿನಿಂ ಕೊಂಡೊಯ್ದರರಸನೆಡೆಗೆ ॥

ಆಗ ದಾರಿಯಲ್ಲಿ ಚಂದ್ರಮತಿ ಮನದಲ್ಲಿ ಹಂಬಲಿಸಿದ್ದು—

ಮುಖಾರಿ—ಝಂಪೆ

ಸತ್ಯವಂತರಿಗಿದು ಕಾಲವಲ್ಲ ॥ ಪ ॥ ದುಷ್ಟ ಜನರಿಗೆ ಸುಭಿಕ್ಷಕಾಲ ॥ ಅ ಪ ॥ ಹರಿಸ್ಮರಣೆ ಮಾಡುವಗೆ ಕ್ಷಯವಾಗುವ ಕಾಲ | ಪರಮಪಾಪಿಗಳಿಗೆ ಸುಭಿಕ್ಷಕಾಲ ॥ ಸ್ಥಿರವಾದ ಪತಿವ್ರತೆಯ ಪರರು ನಿಂದಿಪ ಕಾಲ | ಧರೆಗೆ ಜಾರೆಯಳ ಕೊಂಡಾಡುವ ಕಾಲ ॥ ೧ ॥ ಉಪಕಾರ ಮಾಡಿದರೆ ಅಪಕರಿಸುವ ಕಾಲ | ಸಕಲವು ತಿಳಿದವಗೆ ದುರ್ಭಿಕ್ಷಕಾಲ ॥ ಪತಿಸುತರುಯೆಂಬುವರ ಸಂಬಲರಿಯದ ಕಾಲ | ಸಟೆಯಲ್ಲವಿದು ವಿಪರೀತಕಾಲ ॥ ೨ ॥ ಧರ್ಮವ ಮಾಡುವಗೆ ನಿರ್ಮೂಲವಾಗುವ ಕಾಲ | ಕರ್ಮಪಾತಕರಿಗೆ ಬಹುಸೌಖ್ಯಕಾಲ ॥ ನಿರ್ಮಲಾತ್ಮಕನಿರಿ ಪುರಂದರವಿಠಲನ | ಮರ್ಮದೊಳು ಭಜಿಸಲರಿಯದ ಕಾಲವಯ್ಯ ॥ —(ದಾ)

ಆಮೇಲೆ ಅವಳ ಶಿರಚ್ಛೇದವಾಗಬೇಕೆಂದು ರಾಜಾಜ್ಞೆಯಾಗುತ್ತಲೆ ದೂತರು ಅವಳನ್ನು ಕರೆದುಕೊಂಡುಬಂದು ಹರಿಶ್ಚಂದ್ರನ ಮುಂದೆ ನಿಲ್ಲಿಸಿ ತಲೆಯನ್ನು ಕಡಿಯೆನ್ನಲು—

ಕಂ॥ ಕಡಿಯಲೆತ್ತಲು ಕಯ್ಯ | ತಡೆದು ಮುನಿ ಮಾಯೆಯಿಂ | ದೊಡಗೂಡೆ ಹೊಲತಿಯರ ಸುಖಿಪೆಯೆಂದ; ॥ ಬಿಡುನುಡಿಯನಾಡೆನೆನು | ತೊಡನವನು ಕತ್ತಿಯನು | ಕಡುಹಿನಿಂ ಬೀಸಿ ಜಯ! ಸತ್ಯವೆಂದ ॥

ಒಡನೆ ಪಾರ್ವತೀಪರಮೇಶ್ವರರು ಪ್ರತ್ಯಕ್ಷರಾಗಿ ರೋಹಿತಾಶ್ವನನ್ನು ಬದುಕಿಸಿದ್ದಲ್ಲದೆ ಹರಿಶ್ಚಂದ್ರನನ್ನು ಕುರಿತು—

ವಾ॥ ಘನಸತ್ಯವೇ ಜೀವವೆಂದಿರ್ದ ನಿನ್ನ ಹೋಲಿ । ಯುನ ಸೇವೆ ಗುರುಸೇವೆ; ಹೊತ್ತ ಹೊಲೆವೇಷ ಪಾ । ವನಪುಣ್ಯವೇಷ; ಸುಡುಗಾಡ ಕಾದಿರ್ಪಿರವು ತಾ ಯಜ್ಞಕರ್ಮದಿರವು; ॥ ಅನುದಿನಂ ನೀನುಂಡ ಶವದ ಶಿರದಕ್ಕಿಯಾ । ಘನಪೆಸಿಪ ಚಾಂದ್ರಾಯಣಂ; ಪುತ್ರನಳಿವು ಜ । ಸ್ಮಸಿಕಾಯುದಳಿವಂಗನಾಹನನ ವಾಯಾಹನನವಂಜಬೇಡೆಂದನು ॥ —(ಹ. ಕಾ)

ಇದನ್ನು ನೋಡಿಯೇ ದೊಡ್ಡವರು ಹೇಳಿರುವದೇನೆಂದರೆ—

ವ॥ ದೇವಲೋಕ ಮರ್ತ್ಯಲೋಕವೆಂಬಿವು ಬೇರಿಲ್ಲ ಕಾಣಿರೋ ; ಸತ್ಯವ ನುಡಿವುದೇ ದೇವಲೋಕ ; ಅಸತ್ಯವ ನುಡಿವುದೇ ಮರ್ತ್ಯಲೋಕ ; ಆಚಾರವೇ ಸ್ವರ್ಗ ; ಅನಾಚಾರವೇ ನರಕ. ಇದಕ್ಕೆ ನೀನೇ ಪ್ರಮಾಣ ಕೂಡಲಸಂಗಮದೇವ ॥ —(ವೀ. ವ. ಶಾ)

ಸತ್ಯದ ವಿಷಯಕ್ಕೆ ಯೋಗಶಾಸ್ತ್ರದವರು ಹೇಳಿರುವ ಪ್ರಾಶಸ್ತ್ಯವೇನೆಂದರೆ—

ಸೂ॥ ಸತ್ಯಪ್ರತಿಷ್ಠಾಯಾಂ ಕ್ರಿಯಾಫಲಾಶ್ರಯತ್ವಮ್ ॥—(ಯೋ. ಸೂ)

ಅ॥ ಸತ್ಯವು ನೆಲೆಗೊಂಡಿದ್ದರೆ ಕ್ರಿಯೆ ಇಲ್ಲದೆ ಕ್ರಿಯಾಫಲಗಳು ದೊರೆಯುವವು.

ಇದನ್ನೆಲ್ಲ ವಿಚಾರಮಾಡಿಯೇ ಕೀರ್ತನಾರಂಭದಲ್ಲಿ ಭಾಗವತೋತ್ತಮರು "ಸತ್ಯವೆಂಬುದೊಂದೇ" ಎಂದು ಮೊದಲಾಗಿ ಉಪದೇಶವನ್ನು ಮಾಡಿರುವರು.

---

# ಸಾವಿತ್ರಿ

## ಪೀಠಿಕೆ — ಪಾತಿವ್ರತ್ಯ

ಶಂಕರಾಭರಣ—ಆದಿತಾಳ

ಗುಣವನೆ ನೀ ನೋಡುವಳಾಗು; । ಮನ । ದಿನಿಯನ ಮನಸಿಗೆ ನೆರವಾಗು ॥ ಪ ॥ ಗಣಿಸದೆ ದೋಷಂಗಳನವನೊಳು ಮೋ । ಣಸುವರಿಯುತ ಸೇವಿಸುವವಳಾಗು ॥ ಅ.ಪ ॥ ಹಣಕಾಸನು ನೋಡಲುಬೇಡ; । ತನ । ಗೆಣೆಸೆ ಕಷ್ಟಬಂತೆನಬೇಡ ॥ ಇನಿಯನ ಕಡೆಯವರನು ತನ್ನವರೆಂ । ದೆನುವದರೊಳು ಹಿಂಜರಿಯಲು ಬೇಡ ॥ ೧ ॥

**ಜಗತ್ತಿನಲ್ಲಿ ವ್ಯವಹಾರವನ್ನು ಮಾಡುವವರೆಲ್ಲರೂ ತಾವು ಆ ವ್ಯವಹಾರದಲ್ಲಿಯೇ ಮುಳುಗಿ ನೆಲಾಹಿಡಿಯದಂತೆ ನೆನೆಸಿಕೊಳ್ಳುತ್ತಿರಬೇಕಾದ ವಿಷಯವನ್ನು ಜ್ಞಾನಿಗಳು ತೋರಿಸುವದೇನೆಂದರೆ—**

ಶ್ಲೋ॥ ನಲಿನೀದಲಗತಜಲಮತಿತರಲಮ್; | ತದ್ವಜ್ಜೀವಿತಮತಿಶಯಚಪಲಮ್; ॥ ವಿದ್ಧಿ ವ್ಯಾಧ್ಯಭಿಮಾನಗ್ರಸ್ತಮ್ । ಲೋಕಂ; ಶೋಕಹತಂ ಚ ಸಮಸ್ತಮ್ ॥ —(ಮೋ. ಮು)

ಅ॥ ಕಮಲದ ಎಲೆಯ ಮೇಲೆ ನೀರು ಬಹು ನಡುಗುತ್ತಿರುತ್ತದೆ. ಹಾಗೆಯೇ ಜೀವಿತವೂ ಬಹುಚಂಚಲವಾದದ್ದು. ರೋಗ, ಅಭಿಮಾನ–ಮೊದಲಾದವುಗಳಿಂದ ಕೂಡಿ ಜಗತ್ತೆಲ್ಲ ದುಃಖದಿಂದ ನೆಲಾಹತ್ತಿರುವದು.

ಆದ್ದರಿಂದ ದುಃಖದ ದಾರಿಯಿಂದ ಹಿಮ್ಮೆಟ್ಟಿಸುವದಕ್ಕಾಗಿ ದೊಡ್ಡವರು ಉಪದೇಶಿಸಿರುವದೇನೆಂದರೆ—

ರೇಗುಪ್ತಿ–ಝಂಪೆ

ಬರಿದೆ ಸಿರಿಯನು ಬಯಸಿ ಬಳಲಿ ಬಾಯಾರದಿರು | ಮರುಳೆ, ಪೂರ್ವದೊಳು ಶಿವನೊಳು ಬೇಡಿ ತರದೆ ॥ ಪ ॥ ನೀನೊಲ್ಲದಿದ್ದರೂ ಬಡತನವು ನಿನಗೆಂತು| ತಾನೆ ಬಂದಿಹುದಿಂತು ಪೂರ್ವದಲ್ಲಿ ॥ ನೀನು ಮಾಡಿದ ಸುಕೃತವಿದ್ದೊಡದರಿಂ ಸಿರಿಯು | ತಾನೆ ಬಂದಿರುವದೀಗೆಳಸಲ್ಕೆಡುವದೆ? ॥ ೧ ॥ ದೊರೆಗಳೆಲ್ಲರು ಮೊದಲು ಪುಣ್ಯಗಳ ಮಾಡದಲೆ | ಸಿರಿಯನುಂಬರೆ? ಬಡವರಘವೆಸಗದೆ ॥ ತಿರಿದು ತಿಂಬರೆ? ಶಿವಗೆ ಪಕ್ಷಪಾತಗಳುಂಟೆ? | ಬರಿಯ ಚೀಲದೊಳು ಕೈ ಇಕ್ಕಲೇನಹುದು? ॥ ೨ ॥ ಕೊಟ್ಟು ಹುಟ್ಟದೆ ಬೇಡೆ ಸಿರಿ ಬರಲು ಸುಕೃತವನ | ನುಷ್ಠಿಸುವರೇಕೆ ಜನರಿದನರಿಯದೆ ॥ ಸಿಟ್ಟಿನಿಂ ಶಿವನ ಬಯ್ವುದಕೆ ಮುಂದಕ್ಕುದಿಸಿ | ಕಷ್ಟಗಳನುಂಡು ತೀರಿಸಬೇಕು ಮನುಜ ॥ ೩ ॥ ಇಂದು ಮಾಡಿದುದಿಂದೆ ಫಲಿಸಬೇಕೆನೆ ಜನರ್ಗೆ | ಮುಂದೆ ಭವವಿಲ್ಲವಾಯ್ತೆಂತಾದೊಡೆ॥ ಇಂದೆ ಬ್ರಹ್ಮಾಂಡವಿದು ಹಾಳಾಗುತಿಹುದಾಗ | ಲೆಂದೊಡಾಗಲ್ಕೆ ನಿನ್ನಿಚ್ಛೆಯೇ? ಮೂಢ ॥ ೪ ॥ ಹಿಂದೆ ಮಾಡಿದುದನಿಂದುಂಬೊಲಿಂದೆಸಗಿದುದೆ | ಮುಂದಕ್ಕೆ ಒರ್ಪುದೆನೆ ಮುಂದದಾರೊ? ॥ ಇಂದಾರೊ? ಎಂದು ಸುಕೃತವನುಳಿಯೆ ಭವಭವದೊ | ಳೆಂದೆಂದಿಗಿಂತು ಕಷ್ಟವು ನಿನಗೆ ಬಿಡದು ॥ ೫ ॥ ಮಾಡಿದವರಿಗೆ ಮಾಡಿದಷ್ಟೆಂಬ ಗಾದೆಯದು | ರೂಢಿಸಿಹುದನು ತಿಳಿದು ಹಿಂದೆ ನಾನು ॥ ಮಾಡಿದಷ್ಟುಂಡುಂಬೆನೆಂದರಿದು ಚಿಂತೆಯನು | ಮಾಡದೆಲೆ ಗುರುಸಿದ್ಧನಂಘ್ರಿಯನು ಭಜಿಸೈ ॥ —(ಕೈ. ಕ)

**ಹಿಂದೆ ಸ್ತ್ರೀ, ಧನ–ಮೊದಲಾದುವುಗಳೆಲ್ಲ ಇದ್ದರೂ ಅದರ ಸದುಪಯೋಗವಾಗದಿದ್ದದ್ದನ್ನು ಒಬ್ಬನು ನೆನೆಸಿಕೊಂಡಿರುವದೇನೆಂದರೆ—**

ವೃ॥ ಪಡೆದತ್ತಿಲ್ಲವೆ ಪೂರ್ವದೊಳ್ನವವಧೂರಾಜ್ಯಾದಿಸೌಭಾಗ್ಯಮಂ? | ಪಡೆದೇಂ; ತನ್ಮಮಕಾರದಿಂ ಪಡೆದೆನೀ ಸಂಸಾರಸಮೃದ್ಧಿಯಂ ॥ ಪಡೆದತ್ತಿಲ್ಲ

ನಿಜಾತ್ಮತತ್ತ್ವರುಚಿಯುಂ, ತದ್ಬೋಧಚಾರಿತ್ರಮುಂ; | ಪಡೆದಂದಾಗಳೆ ಮುಕ್ತಿಯುಂ ಪಡೆಯೆಸೇ ? ರತ್ನಾಕರಾಧೀಶ್ವರಾ ॥ —(ರ. ಶ)

ಆದ್ದರಿಂದ ಬರೀ ಸ್ತ್ರೀ ಮೊದಲಾದದ್ದನ್ನು ಪಡೆದ ಮಾತ್ರಕ್ಕೇ ನಮಗೆ ಇಹಲೋಕದ ಯೋಚನೆ ತಪ್ಪಿ ಪರಲೋಕದ ಸುಖದ ದಾರಿ ದೊರೆಯಲಾರದೆಂದು ತಿಳಿಯುವದರಿಂದ ಇಹಪರಗಳೆರಡಕ್ಕೂ ಸಾಧನಳಾದ ಸ್ತ್ರೀ ಹೇಗಿರಬೇಕೆಂಬುದನ್ನು ಒಬ್ಬ ಕವಿ ಹೇಳಿರುವದೇನೆಂದರೆ—

ಶ್ಲೋ॥ ಅನುಕೂಲಾಂ, ವಿಮಲಾಂಗೀಂ,| ಕುಲಜಾಂ, ಕುಶಲಾಂ, ಸುಶೀಲಸಂಪನ್ನಾಮ್ ॥ ಪಂಚಲಕಾರಾಂ ಭಾರ್ಯಾಂ ಪುರುಷಃ ಪುಣ್ಯೋದಯಾಲ್ಲಭತೇ ॥ (ಸು.)

ಅ॥ ಅನುಕೂಲಗಳಾಗಿಯೂ ನಿರ್ಮಲವಾದ ದೇಹವುಳ್ಳವಳಾಗಿಯೂ ಸತ್ಕುಲದಲ್ಲಿ ಹುಟ್ಟಿದವಳಾಗಿಯೂ ಕುಶಲತೆಯುಳ್ಳವಳಾಗಿಯೂ ಸುಶೀಲಳಾಗಿಯೂ— ಈ ಐದು ಲಕಾರಗಳಿರುವ ಹೆಂಡತಿಯನ್ನು ಪುರುಷನು ಪೂರ್ವಪುಣ್ಯದಿಂದ ಪಡೆಯುವನು.

ಆಕೆಯ ಗುಣಗಳನ್ನು ಲಕ್ಷ್ಯದಲ್ಲಿಟ್ಟುಕೊಂಡು ಭಗವದ್ಭಕ್ತರು ತಮ್ಮ ಮನಸ್ಸಿಗೆ ಉಪದೇಶ ಮಾಡಿರುವವೇನೆಂದರೆ —

ರಾಮಪ್ರಿಯ–ರೂಪಕ

ಹೀಗಿರು ನೀನೀಗ ಮನವೆ | ಈ ಮಾತ ಕೇಳಿ ॥ ಪ ॥ ರಾಗಲೋಭಗಳನು ನೀ ವಿ | ರಾಗಕಾಗಿ ಮಾಡಿಕೊಂಡು ॥ ಅ. ಪ ॥ ಸಾಧುಸಂತರಾದವರ ಪಾದಸೇವೆ ದೊರೆಯಲೆಂದು | ಆದರದಿಂದಾಸೆಯನ್ನು ಮಾಡುನೀನು ಸಂತತ ॥ ಮೋದಿಸಿಯೊಳಗೊಳ್ಳೆಯವುಗಳಾದ ಗುಣಗಳುಳ್ಳವರೊಳು | ಮೋದದಿಂದ ಪ್ರೀತಿಮಾಡು ಭೇದಬುದ್ಧಿಯನ್ನು ಬಿಟ್ಟು ॥ ೧ ॥ ನಿನ್ನ ನೀನು ಬಿಗಿಹಿಡಿಯುತ, ಅನ್ಯವನ್ನು ಬಯಸದಿರುತ, | ಅನ್ಯಾಯಕೆ ಹೋಗದಿರುತ ಮಾನ್ಯತೆಗಧಿಕಾರಿಯಾಗುತ ॥ ಚೆನ್ನಾಗಿರುವಂದದೊಳು ವದಾನ್ಯಗುಣವ ಬೆಳೆಸಿಕೊಳುತ | ನಿನ್ನ ನೀನು ತಿಳಿದು ನೀನೆ ಧನ್ಯನೆಂದು ಭಾವಿಸುತಿರುತ ॥ ೨ ॥ ಗುರುಜನಂಗಳೆದುರಲ್ಲಿ ಶಿರವ ಬಾಗಿ ನಡೆಯುತಿರುತ | ನಿರುತವು ವಿದ್ಯಾವ್ಯಸನದ ಭರವ ಹೆಚ್ಚುಮಾಡಿಕೊಂಡು ॥ ಹೊರಗಣಿಂದ ದೂರುಗಳನು ಬರಮಾಡಿಕೊಳ್ಳದಿರುತ |. ನೆರೆ ಚಿನ್ಮಯನಲ್ಲಿ ಮಮತೆಯಿರಿಸಿ ನಿತ್ಯಸುಖವ ಪಡುತ ॥ ೩ ॥ (ಭಕ್ತಿ. ಗೀ.)

ಹೀಗೆ ಮೇಲುಪಙ್ಕ್ತಿಯಾಗಿರುವ ಗೃಹಿಣಿಯರಿಂದ ಇಹಪರಗಳೆರಡೂ ಹಿತಕರವಾಗುವದರಿಂದ ಸ್ತ್ರೀಯರನ್ನು ಕುರಿತು ಭಾಗವತೋತ್ತಮರು ಕೀರ್ತನಾರಂಭದಲ್ಲಿ “ಗುಣವನೆ ನೀ ನೋಡುವಳಾಗು” ಎಂದು ಮುಂತಾಗಿ ಉಪದೇಶಿಸಿರುವರು. ಇದಕ್ಕೆ ನಿದರ್ಶನವಾಗಿ ಸಾವಿತ್ರಿಯ ಉಪಾಖ್ಯಾನವು ನಿರೂಪಣ ಮಾಡಲಾಗುವದು.

## ಆಖ್ಯಾನ

ಕೀ॥ ಮೆರೆವ ಮದ್ರದೇಶದೊಳಶ್ವಗತಿ । ನರಪನಿರಲು ವೈಭವದಿಂದ ॥ ತರಳರಿಲ್ಲದಿಹ ಕೊರತೆಯೊಂದವನ । ಕೊರೆಯುತಿತ್ತು ತಾ ಭರದಿಂದ ॥

ಮಕ್ಕಳಿಗಾಗಿ ಅವನು ಹದಿನೆಂಟು ವರ್ಷ ತಪಶ್ಚರ್ಯೆಯನ್ನು ಮಾಡಿ ಕೊನೆಗೆ ಪ್ರತ್ಯಕ್ಷನಾದ ಸೂರ್ಯನಾರಾಯಣನ ಮುಂದೆ ತನ್ನ ಇಷ್ಟಾರ್ಥವನ್ನು ಹೇಳಿಕೊಂಡು ಪ್ರಾರ್ಥಿಸಿದ್ದು—

ಭೈರವಿ—ರೂಪಕ

ಕರುಣದಿಂದ ಪೊರೆವುದೆನ್ನ । ಪರಮಪುರುಷ, ಸೂರ್ಯದೇವ ॥ ಪ ॥ ಗಾಲಿಯೊಂದೆ ಇರುವ ರಥವು । ಕಾಲು ಕುಂಟನಾದ ಸಾರಥಿ ॥ ಏಳು ಕುದುರೆ ಇರಲು ನಡೆವ । ಕಾಲಚಕ್ರನಿಯಂತಾರ ॥ ೧ ॥ ಲೋಕಕೆಲ್ಲ ಕಣ್ಣೆನಿಸುತ । ಭೀಕರಾಂಧಕಾರವನ್ನು ॥ ನೂಕಿ ಜಗಕೆ ಬೆಳಕನೀವ । ಸಾಕಾರ ಪರಬ್ರಹ್ಮ ॥ ೨ ॥ ಸರ್ವಸೃಷ್ಟಿಕರ್ತನಾಗಿ । ಸರ್ವಸ್ಥಿತಿಗೆ ಕಾರಣನಾಗಿ ॥ ಉರ್ವಿಯೊಳಗೆ ಬೆಳಗುತಿರುವ । ಸರ್ವದೇವ ಚಿತ್ಸ್ವರೂಪ ॥ ೩ ॥ —(ಭಕ್ತಿ. ಗೀ.)

ಕೊನೆಗೆ ಅವನಿಗೆ ಸೂರ್ಯನ ಅನುಗ್ರಹದಿಂದ ಒಂದು ಹೆಣ್ಣಾಯಿತು ಅದು ಹೇಗಿತ್ತೆಂದರೆ—

ಭಾ॥ ನಗೆನೊಗದ, ತೊಳಗುವ ಕಪೋಲದ, । ಚಿಗುರನಣಕಿಪ ಕರತಲದ, ಸಂ । ಪಗೆಯ ಪೋಲುವ ನಾಸಿಕದ, ಪೊಗರೊಗುವ ಚೆಂದುಟಿಯ, ॥ ಬೊಗಸೆಗಣ್ಣಿನ, ತುಂಬಿಗುರುಳಿನ । ಮಗಳ ಚೆಲುವಿಕೆಯನು ನಿರೀಕ್ಷಿಸಿ । ಬಗೆಯೊಳಾನಂದಿಪರು ಜನನೀಜನಕರಡಿಗಡಿಗೆ ॥ —(ಸಾ. ಚ)

ಈ ಹುಡುಗಿಗೆ ಸಾವಿತ್ರಿಯೆಂದು ನಾಮಕರಣವಾಯಿತು. ಈ ಹುಡುಗಿಯು ಬೆಳೆದಾಗ—

ಚೌ॥ ರತಿಯ ಸುವಿಲಾಸಗಳನಾ ಭಾ—ರತಿಯ ವಾಕ್ಚತುರತೆಯನು । ಕ್ಷಿತಿಯೊಳತಿಶಯಳೆನಿಸಿದಾ ಹರಿ— ಸತಿಯ ಸಮವಹ ಸೊಬಗನು ॥ ಕೃತಕವಲ್ಲದ ರೀತಿಯೊಳು ನೃಪ—ಸುತೆ ತಳೆದು ಶೋಭಿಪುಗನು । ನುತಿಪುತಿದ್ದರನುಂದ ಹರ್ಷದಿ—ಮತಿಯುತರು ಗುಣತತಿಯನು ॥

ಹೀಗೆ ಬೆಳೆದ ಆ ಕನ್ಯೆಯ ದೆಸೆಯಿಂದ ಉಳಿದವರಿಗೆಲ್ಲ ಆನಂದವಾಗಿದ್ದರೂ ಅಶ್ವಪತಿರಾಜನಿಗೆ ಮಾತ್ರ ಹಾಗಿರಲಿಲ್ಲ ಏಕೆಂದರೆ—

ಶ್ಲೋ॥ ಜಾತೇತಿ ಕನ್ಯಾ ಮಹತೀತಿ ಚಿಂತಾ । ಕಸ್ಮೈ ಪ್ರದೇಯೇತಿ ಮಹಾನ್ ವಿತರ್ಕಃ ॥ ದತ್ತಾ ಸುಖಂ ಯಾಸ್ಯತಿ ವಾ ನವೇತಿ । ಕನ್ಯಾಪಿತೃತ್ವಂ ಖಲು ನಾಮ ಕಷ್ಟಮ್ ॥ —(ಸು.)

ಅ॥ ಹೆಣ್ಣು ಹುಟ್ಟಿತೆಂದರೇನೆ ದೊಡ್ಡ ಚಿಂತೆ. ಯಾರಿಗೆ ಕೊಡಬೇಕೆಂದು ದೊಡ್ಡ ಯೋಚನೆ. ಕೊಟ್ಟ ಕಡೆ ಸುಖವಾಗಿರುತ್ತಾಳೊ ಇಲ್ಲವೊ ಎಂದು ಬೇರೆ ಚಿಂತೆ. ಹೆಣ್ಣಿನ ತಂದೆಯಾಗುವದು ಬಹಳ ಕಷ್ಟಕ್ಕೆ ಕಾರಣ.

ಇದರ ಜೊತೆಗೆ ಮತ್ತೊಂದು ಚಿಂತೆಯು ಕಾರಣವುಂಟಾಗಿದ್ದದ್ದೇನೆಂದರೆ—

ಶ್ಲೋ|| ತಾಂ ತು ಪದ್ಮಪಲಾಶಾಕ್ಷೀಂ ಜ್ವಲಂತಮಿವ ತೇಜಸಾ । ನ ಕಶ್ಚಿದ್ವರಯಾಮಾಸ ತೇಜಸಾ ಪ್ರತಿವಾರಿತಃ || —(ಸಂ. ಭಾರ)

ಅ|| ತೇಜಸ್ಸಿನಿಂದ ಥಳಥಳ ಹೊಳೆಯುತ್ತ ಕಮಲದಂತೆ ಕಣ್ಣುಳ್ಳ ಆ ಸಾವಿತ್ರಿಯನ್ನು ಯಾರೂ ತಮ್ಮ ಪತ್ನಿಯನ್ನಾಗಿ ವರಿಸಲಿಲ್ಲ. ಎಲ್ಲರೂ ಅವಳ ತೇಜಸ್ಸಿನಿಂದ ಬೆಚ್ಚಿಬಿದ್ದವರಾಗಿ ಹಿಂಜರಿಯುತ್ತಿದ್ದರು.

ಕೊನೆಗೆ ಅಶ್ವಪತಿಯು ನೀನೇ ಹೋಗಿ ಪತಿಯನ್ನು ವರಿಸಿಕೊಂಡು ಬಾರೆಂದು ಮಗಳಿಗೆ ಹೇಳಿದನು. ಆಗ ಆಕೆ

ಸಾ|| ಬರಿಮೆರುಗಿನ ಲೌಕಿಕರಹ ಮನುಜರ | ಸಿರಿ ಶಾಶ್ವತವಲ್ಲೆಂದು ||
ತರಳೆ ವನಕೆ ಪೊರಟಳು ಧಾರ್ಮಿಕನಹ | ಪುರುಷನ ವರಿಸುವೆನೆಂದು ||

ಅಲ್ಲಿ ಸಾವಿತ್ರಿಯು ತಪೋವನಗಳನ್ನು ಕಂಡು ವರ್ಣಿಸಿದ್ದು—

ಬೇಗಡೆ—ರೂಪಕ

ಎಷ್ಟು ಮನೋಹರವೀ ವನ! || ಪ || ಸೃಷ್ಟಿಗಿದೇ ಸಮ್ಮೋಹನ || ಅ.ಪ || ನೊರೆಯುತಿರುವ ಮರಿದುಂಬಿಯು | ನೆರವಿ ಈಗ ಬರುವ ಜನರ || ಕರೆಕರೆಯುವ ಪರಿಪರಿಯೊಳು | ಪರಿಶೋಭಿಸುತಿರ್ಪುದಾಹ ! || ೧ || ಬಳಿಗೆ ಬಂದ ಜನರಿಗೆಲ್ಲ | ತಲೆಯ ಬಗ್ಗಿಸಿ ವಂದಿಪಂತೆ || ನೆಳಲನೀಯುತ ಮರಗಳೆಲ್ಲ | ಫಲಭಾರದಿ ಬಗ್ಗಿರುವವು || ೨ || ಅತಿಥಿಗಳಿಗೆ ಪೂಜೆಗೆಯ್ವ | ವ್ರತವ ಹಿಡಿದು ಮರಗಳೆಲ್ಲ || ಹಿತದಿ ಹೂಗಳ ಮಳೆಗರೆಯುತ | ಸತತವು ಸತ್ಕಾರಗೈವವು || ೩ ||

ಆ ಆಶ್ರಮಗಳಲ್ಲಿ ಪ್ರಯಾಣಮಾಡುವಾಗ ಸಾವಿತ್ರಿಯು—

ಶ್ಲೋ|| ಏವಂ ತೀರ್ಥೇಷು ಸರ್ವೇಷು ಧನೋತ್ಸರ್ಗಂ ನೃಪಾತ್ಮಜಾ | ಕುರ್ವತೀ ದ್ವಿಜಮುಖ್ಯಾನಾಂ ತಂ ತಂ ದೇಶಂ ಜಗಾಮ ಹ || —(ಸಂ. ಭಾರ)

ಅ|| ದಾರಿಯುದ್ದಕ್ಕೂ ಅತಿಥಿಗಳನ್ನು ಸತ್ಕರಿಸುತ್ತ ಆ ರಾಜಕುಮಾರಿಯು ಎಲ್ಲ ತೀರ್ಥಗಳಲ್ಲಿಯೂ ಮುಖ್ಯರಾದ ಬ್ರಾಹ್ಮಣರಿಗೆ ದಾನವನ್ನು ಮಾಡುತ್ತ ಆಯಾ ಆಶ್ರಮಗಳನ್ನು ದಾಟುತ್ತಿದ್ದಳು. ಹೀಗೆ ಪ್ರವಾಸಮಾಡುತ್ತಿದ್ದ ಸಾವಿತ್ರಿಯು ತನ್ನ ಪ್ರಯಾಣವನ್ನು ಮುಗಿಸಿಕೊಂಡು ಹಿಂದಿರುಗಿ ಮನೆಗೆ ಬಂದಾಗ ತಂದೆಯು ನಾರದರೊಡನೆ ಮಾತಾಡುತ್ತ ಕುಳಿತಿದ್ದನು. ಸಾವಿತ್ರಿಯು ಬಂದು ಇಬ್ಬರಿಗೂ ನಮಸ್ಕಾರವನ್ನುಮಾಡಿ ನಿಂತಾಗ ನಾರದರು ಅಶ್ವಪತಿಯನ್ನು ಕುರಿತು ಹೇಳಿದ್ದು-

ಶ್ಲೋ|| ಕ್ವ ಗತಾಽಭೂತ್ಸುತೇಯಂ ತೇ ಕುತಶ್ಚೈವಾಗತಾ ನೃಪ | ಕಿಮರ್ಥಂ ಯುವತೀಂ ಭದ್ರ, ನ ಚೈನಾಂ ಸಂಪ್ರಯಚ್ಛಸಿ? ||

ಅ|| ನಿನ್ನ ಮಗಳು ಎಲ್ಲಿಗೆ ಹೋಗಿದ್ದಳು? ಎಲ್ಲಿಂದ ಬಂದಳು? ಎಲೈ ಮಂಗಲಕರನಾದ ರಾಜನೆ, ಈ ಪ್ರಾಯಸ್ಥಳಿಗಿನ್ನೂ ಏಕೆ ಮದುವೆಮಾಡಲಿಲ್ಲ?

ಆಗ ರಾಜನು ಅವಳ ಪ್ರವಾಸದ ಉದ್ದೇಶವನ್ನು ನಾರದರಿಗೆ ತಿಳಿಸಲಾಗಿ ನಾರದರು ಪ್ರವಾಸದ ಫಲವನ್ನು ಹೇಳೆಂದು ಸಾವಿತ್ರಿಯನ್ನು ಕೇಳಿದರು. ಅದಕ್ಕೆ ಸಾವಿತ್ರಿ ಹೇಳಿದ್ದು—

ಕಂ|| ನೆರೆ ಸಾಲ್ವನೆಂಬ ನಾ | ಡರಸಂ ದ್ಯುಮತ್ಸೇನ | ಕುರುಡಾಗಿ ರಾಜ್ಯವನು ಕಳೆದುಕೊಂಡು || ಇರೆ ವನದೊಳವನ ಮಗ | ವರಸತ್ಯವಂತನನು | ವರಿಸಿದೆನು ತಪಸಿಯಾಗಿರುವವನನ್ನು ||

ಒಡನೆ ನಾರದರು ನಿಟ್ಟುಸಿರನ್ನು ಬಿಟ್ಟದ್ದನ್ನು ನೋಡಿ ಅಶ್ವಪತಿಯು ಸತ್ಯವಂತನ ಗ್ರಹಚಾರವನ್ನು ಕೇಳಿದಾಗ ನಾರದರು ಹೇಳಿದ್ದು—

ಶ್ಲೋ|| ಏಕಾಸನಸ್ಥಾ ಜಲವಾಯುಭಕ್ಷಾ | ಮುಮುಕ್ಷವಸ್ತ್ಯಕ್ತಪರಿಗ್ರಹಾಶ್ಚ || ಪೃಚ್ಛಂತಿ ತೇಽಪ್ಯಂಬರಚಾರಿಚಾರಮ್ |ದೈವಜ್ಞಮುಸ್ಯೇ ಕಿಮುತಾರ್ಥಚಿತ್ತಾಃ || — (ಸು)

ಅ|| ಒಂದೇ ಆಸನದಲ್ಲಿ ಕುಳಿತು ನೀರನ್ನೂ ಗಾಳಿಯನ್ನೂ ಕುಡಿದುಕೊಂಡು ಮೋಕ್ಷವನ್ನು ಬಯಸಿ ಎಲ್ಲ ಸುಖಸಾಧನಗಳನ್ನೂ ಕೈಬಿಟ್ಟಿರುವವರು ಕೂಡ ಜೋಯಿಸರನ್ನು ಕುರಿತು ಗ್ರಹಬಲವನ್ನು ಕೇಳುತ್ತಾರೆ. ಇನ್ನು ಪ್ರಾಪಂಚಿಕರ ವಿಷಯದಲ್ಲಿ ಹೇಳುವದೇನು?

ಕಲವು ಶಾಸ್ತ್ರಗಳು ಹೀಗೆ ಬಹಳ ಉಪಯೋಗದಲ್ಲಿರುವವು. ಅವು ಯಾವವೆಂದರೆ—

ಶ್ಲೋ|| ಅನ್ಯಾನಿ ಶಾಸ್ತ್ರಾಣಿ ವಿನೋದಮಾತ್ರಂ; | ಪ್ರಾಪ್ತೇಷು ವಾ ತೇಷು ನ ತೈಶ್ಚ ಕಿಂಚಿತ್; || ಚಿಕಿತ್ಸಿತಜ್ಯೋತಿಷಮಂತ್ರವಾದಾಃ | ಪದೇ ಪದೇ ಪ್ರತ್ಯಯಮಾವಹಂತಿ || —(ಸು)

ಅ|| ಉಳಿದ ಶಾಸ್ತ್ರಗಳೆಲ್ಲ ವಿನೋದಕ್ಕೆ ಮಾತ್ರವೇ ಸರಿ. ಅವು ಬಂದರೂ ಅವುಗಳಿಂದ ಏನೂ ಪ್ರಯೋಜನವಿಲ್ಲ. ವೈದ್ಯ, ಜ್ಯೋತಿಷ, ಮಂತ್ರವಾದ–ಇವು ಮತ್ತೆ ಮತ್ತೆ ನಂಬಿಕೆಯನ್ನುಂಟುಮಾಡುತ್ತವೆ.

ಎಂದು ಸತ್ಯವಂತನ ವಿಷಯವನ್ನು ಹೇಳುವದಕ್ಕೆ ಹೊರಟು—

ದಿಂ|| ಕುದುರೆಯಂ ನೋಡಲ್ಕವಗೆ ಪ್ರೀತಿ ಹೆಚ್ಚು; | ಕುದುರೆಯಂ ಬರೆವಾ ಕಲೆಯೊಳವಗೆ ಮೆಚ್ಚು; || ಚದುರರೀತನ ಯೋಗ್ಯತೆಯನೆಲ್ಲ ನೋಡಿ | ಮುದದಿ ಚಿತ್ರಾಶ್ವ ಎಂದು ಕರೆವ ರೂಢಿ ||

ಇಷ್ಟೇ ಅಲ್ಲ—

ಕಂ|| ರಂತಿಯಯಾತಿಗಳೊಲ್ ಗುಣ | ವಂತಂ; ತಾಂ ರೂಪದೊಳ್ ಜಯಂತನೊಲೆಸೆವಂ; || ಸಂತರ ಸೇವೆಯೊಳಾ ಶಿಬಿ | ಯಂತಿರುವಂ; ಸತ್ಯವಾಕ್ಯನೀತಂ ಧೀರಂ || —(ಸಾ. ದೃ)

ಹಾಗಾದರೆ ನಿಟ್ಟುಸುರಿಟ್ಟದ್ದೇಕೆನಲು ನಾರದರು ಹೇಳಿದ್ದು—

ಶ್ಲೋ|| ಏಕೋ ದೋಷೋಽಸ್ತಿ ನಾನ್ಯೋಽಸ್ಯ ಸೋಽದ್ಯಪ್ರಭೃತಿ ಸತ್ಯವಾನ್ | ಸಂವತ್ಸರೇಣ ಕ್ಷೀಣಾಯುರ್ದೇಹನ್ಯಾಸಂ ಕರಿಷ್ಯತಿ ||—(ಸಂ. ಭಾರ)

ಅ|| ಇವನಲ್ಲಿ ಒಂದು ದೋಷವಿದೆ, ಇನ್ನೊಂದಿಲ್ಲ. ಆ ದೋಷವೇನೆಂದರೆ ಸತ್ಯವಂತನು ಇಂದಿನಿಂದ ಒಂದುವರ್ಷದಲ್ಲಿ ಆಯುಸ್ಸನ್ನು ಮುಗಿಸಿ ದೇಹವನ್ನು ಬಿಡುತ್ತಾನೆ.

ಆದ್ದರಿಂದ ಬೇರೆಯವನನ್ನು ವರಿಸುವಂತೆ ಮಗಳಿಗೆ ಹೇಳಿನ್ನಲು ತಂದೆ ಮಗಳ ಮುಂದೆ ಆ ಮಾತು ತೆಗೆದಾಗ ಮಗಳು ಹೇಳಿದ್ದು—

ಕಾಂಬೋದಿ—ಅಟತಾಳ

ತಿರುಗಿಸಲಾರೆನು ಮನವ | ಒಮ್ಮೆ | ವರಿಸಿದವನಿಗೆ ನಾಸಿತ್ತೆನು ತನುವ || ಪ || ಧರಣಿಯೊಳಗೆ ಕಲ್ಲಿಳೆರಡು ಹೋಳಾಗುವ | ದರಿಯಲೊಂದೇ ಸಾರಿ ಯಲ್ಲವೆ ಪೇಳ್ || ಪರಿಶುದ್ಧವಂಶದ ಕನ್ಯೆಯು ನಾನಾಗಿ | ವರಿಸುತೊಬ್ಬನ ಮತ್ತೆ ವರಿಪೆನೆಂತನ್ಯನ || ೧ || ಕುಲಜರು ಕನ್ಯೆಯ ದಾನವಗೈವುದು | ಇಳೆಯೊಳ ಗೊಂದೇ ಸಲವಲ್ಲವೇ? ತಿಳಿದಿದನೊಬ್ಬನ ವರಿಸಿದ ನಾನೀಗ | ತಿಳಿಗೇಡಿಯಹಾಗಲೆ? ಪರಿಸಿ ನುತ್ತೊಬ್ಬನ || ೨ || ದಾಸಿಗಳೀ ನೆಲದೊಳು ಯಾಚಕರ ಮುಂದೆ | ದಾನ ಮಾಡುವದೊಮ್ಮೆಯೇ ಅಲ್ಲವೆ? || ದಾನ ಮಾಡಿಹೆನೆನ್ನನೊಬ್ಬನಿಗದ ಬಿಟ್ಟು | ದಾನವು ಮತ್ತೊಬ್ಬನಿಗೆ ಶೋಭಿಸುವದೆ? || ೩ ||

ಆದ್ದರಿಂದ ನಾನಾದರೊ—

ಕಂ|| ಮನದೊಳ್ವರಿಸಿದೆನಾತನ | ನೆನಗಾತನೆ ಪುರುಷನುಳಿದ ಪೂರುಷರೆಲ್ಲಂ||
ಜನಕರ್ತನುಜಾತರ್ಮೇ | ಣನುಜಾತರೆನಿಪ್ಪ ಬಗೆಗೆ ಬಂದಪರಕ್ಕುಂ || —(ಸು)

ಕೊನೆಗೆ ನಾರದರು ಉಪಾಯಾಂತರವನ್ನರಿಯದೆ ಎಲ್ಲರನ್ನೂ ಆಶೀರ್ವದಿಸಿ ಹೊರಟುಹೋದರು. ಇತ್ತ ಅಶ್ವಪತಿಯು ಮಗಳನ್ನು ಸತ್ಯವಂತನಿಗೆ ಕೊಟ್ಟು ಮದುವೆಯನ್ನು ಮಾಡುವದಕ್ಕೆ ಸಕಲ ಸನ್ನಾಹದೊಡನೆ ಹೊರಟು ಆ ಆಶ್ರಮದ ಬಳಿಗೆ ಬಂದು ನೋಡಿ ಹೇಳಿದ್ದು—

ಕಂ|| ಕರುಣದೆ ಪೆಣ್ಸಿಂಗಂ ಮೊಲೆ | ಯುರರೇ ಕರಿಶಾಬಕಿತ್ತು ಪೊರೆಗುಂ; ಪುಲಿಯಾ || ಹರಿಣಂಗಳನಾಡಿಸುತುರೆ | ಹರುಷದೊಳಿರುತಿರ್ಕು ಮುಕ್ಕಜಂ ಮುನಿತೇಜಂ! || —(ಸಾ. ನಾ)

ಹೀಗೆ ದ್ಯುಮತ್ಸೇನನ ತಪಃಪ್ರಭಾವಕ್ಕೆ ಬೆರಗಾಗಿ ಆಶ್ರಮಕ್ಕೆ ಹೋಗುತ್ತಲೆ ಒಬ್ಬರಿಗೊಬ್ಬರಿಗೆ ಯೋಗಕ್ಷೇಮದ ಮಾತುಗಳಾದ ಸಮಯದಲ್ಲಿ ದ್ಯುಮತ್ಸೇನನು ನಾಚಿ ತಲೆ ಬಗ್ಗಿಸಿಕೊಂಡು ಹೇಳಿದ್ದು—

ಶ್ಲೋ|| ಅತ್ಯಂತವಿಮುಖೇ ದೈವೇ ವ್ಯರ್ಥೇ ಯತ್ನೇ ಚ ಪೌರುಷೇ |
ಮನಸ್ವಿನೋ ದರಿದ್ರಸ್ಯ ವನಾದನ್ಯತ್ಕುತಃ ಸುಖಮ್! || —(ಸು)

ಅ|| ದೇವರ ಅನುಗ್ರಹವು ದೂರವಾಗಿ ಪುರುಷಪ್ರಯತ್ನವೇನೂ ನಡೆಯದಿರುವ ಬಡವನಿಗೆ ಅಡವಿಯನ್ನು ಬಿಟ್ಟರೆ ಸುಖವಿನ್ನೆಲ್ಲಿ?

ಮತ್ತು—

ಶ್ಲೋ|| ದೂಯೇ ಕಾಂತಾಕರಂ ವೀಕ್ಷ್ಯ ಮಣಿಕಂಕಣವರ್ಜಿತಮ್; |
ಅತಃ ಪರಂ ಪರಂ ದೂಯೇ ಮಣಿಕಂ ಕಣವರ್ಜಿತಮ್ || —(ಸು)

ಅ|| ಹೆಂಡತಿಯ ಕಯ್ಯಲ್ಲಿ ರತ್ನಖಚಿತವಾದ ಬಳೆ ಇಲ್ಲದಿರುವದನ್ನು ನೋಡಿ ಬಹಳ ನೊಂದುಕೊಳ್ಳುತ್ತೇನೆ. ಅದಕ್ಕಿಂತಲೂ ನಮ್ಮ ಮಣ್ಣಿನ ಪಾತ್ರೆಯಲ್ಲಿ ಕಾಳಿಲ್ಲದಿರುವದನ್ನು ನೋಡಿ ಇನ್ನಷ್ಟು ಮರುಗುತ್ತೇನೆ—

ಎನ್ನುತ್ತಿರುವಾಗ ಇಷ್ಟಾದರೂ ನಿನ್ನ ಯೋಗ್ಯತಾವಿಶೇಷವನ್ನು ನೋಡಿ ಸತ್ಯವಂತನಿಗೆ ಮಗಳನ್ನು ಕೊಡುವದಕ್ಕೆ ಬಂದಿರುವೆನೆಂದು ಹೇಳಿದ್ದನ್ನು ಕೇಳಿ ದ್ಯುಮತ್ಸೇನನು ಹೇಳಿದ್ದು—

ಶ್ಲೋ॥ ಚ್ಯುತಾ ಸ್ಮ ರಾಜ್ಯಾದ್ವನವಾಸಮಾಶ್ರಿತಾ । ಶ್ಚರಾಮ ಧರ್ಮಂ ನಿಯತಾಸ್ತಪಸ್ವಿನಃ ॥ ಕಥಂ ತ್ವನರ್ಹಾ ವನವಾಸಮಾಶ್ರಮೇ । ಸಹಿಷ್ಯತಿ ? ಕ್ಲೇಶಮಿಮಂ ಸುತಾ ತವ ॥ —(ಸಂ. ಭಾಗ)

ಟ॥ ರಾಜ್ಯವನ್ನು ಕಳೆದುಕೊಂಡು ಕಾಡಿನಲ್ಲಿರುವವರಾಗಿ ನಿಯಮಗಳನ್ನು ಮಾಡಿಕೊಂಡು ತಪಸ್ವಿಗಳ ಧರ್ಮದಲ್ಲಿದೇವೆ. ಕಾಡಿನಲ್ಲಿರುವದಕ್ಕೆ ತಕ್ಕವಳಲ್ಲದ ನಿನ್ನ ಮಗಳು ಆಶ್ರಮದಲ್ಲಿ ಕಷ್ಟವನ್ನು ಹೇಗೆ ತಡೆದುಕೊಳ್ಳುವಳು ?

ಅದಕ್ಕೆ ಅಶ್ವಪತಿ ಹೇಳಿದ್ದು—

ಭಾ॥ ವಿನುತಿರ್ದ? ನೀನಿಂತು ನುಡಿವರೆ? । ಧಾನಿವೃದ್ಧಿಗಳೆಂಬಿವು ತಾ। ನೇನು ಶಾಶ್ವತಗಳೆ? ವಿಚಾರಿಸಿ ನೋಡೆ ನೆಲೆಯಿಲ್ಲ; ॥ ದೀನನಾಗುವನೊಮ್ಮೆ ರಾಜ್ಯ । ಶ್ರೀ ನಿಲಯನಾದವನು; ದೀನನು । ವಿಾ ನೆಲಕೆ ಸಮ್ರಾಜನೆನಿಸುವನೊಮ್ಮೆ ಕೇಳೆಂದ ॥ —(ಸಾ ಚ)

ಇದೇ ಅಭಿಪ್ರಾಯವನ್ನೇ ನೀತಿಶಾಸ್ತ್ರಕಾರರು ಉದಾಹರಣಿಯೊಡನೆ ಹೇಳಿರುವರು—

ವೃ॥ ಉಡುರಾಜಂ ಕಳೆಗುಂದಿ ಪೆರ್ಚದಿಹನೇ? ನ್ಯಗ್ರೋಧಬೀಜಂ ಕಿಲಂ। ಪಿಡಿದುಂ ಪೇರ್ಮರನಾಗದೇ? ಎಳಗರುಂ ಎತ್ತಾಗದೇ ಲೋಕದೊಳ್? ॥ ಮಿಡಿ ಪಣ್ಣಾಗದೆ? ದೈವದೊಲ್ಮೆಯಿರೆ ತಾ ಕಾಲಾನುಕಾಲಕ್ಕೆ ಪೇಳ್। ಒಡವಂ ಬಲ್ಲಿದನಾಗನೇ? ಹರ ಹರಾ! ಶ್ರೀ ಚೆನ್ನಸೋಮೇಶ್ವರ ॥ —(ಸೋ. ಶ)

ಹೀಗೆಂದೊಪ್ಪಿಸಿ ವಿಧಿವತ್ತಾಗಿ ಮದುವೆಯನ್ನು ಮಾಡಿಕೊಟ್ಟು ಹೊರಡುವಾಗ ಮಗಳಿಗೆ ಹೇಳಿದ ಬುದ್ಧಿವಾದ—

ಯರಕುಲಕಾಂಬೋದಿ—ರೂಪಕ

ನೀನಿಂತಿರು ಮುದ್ದುಮಗಳೆ । ಪ್ರಾಣೇಶನ ಸೇವೆಯಲ್ಲಿ ॥ ಪ ॥ ಕ್ಷೋಣಿಯೊಳಗೆ ಧನ್ಯಳೆನಿಸು । ಮಾನಿತಳಾಗಿರುತ ॥ ಅ. ಪ. ॥ ಪತಿಯೊಳು ನೀನನವರತವು । ಅತಿಭಕ್ತಿಯ ಮಾಡುತಲಿರು ॥ ಪತಿಯಾಶ್ರಿತರೆಲ್ಲರ ಬಹು । ಹಿತದಿಂ ನೀಂ ನೋಡುತ್ತಿರು ॥ ೧ ॥ ಅತ್ತೆ ಮಾವ ಹೇಳಿದಂತೆ । ನಿತ್ಯವು ನೀ ಕೇಳುತ್ತಿರು ॥ ಅತ್ತಿಗೆನಾದಿನಿಯರ ಮೇ । ಲುತ್ತಮಭಾವನೆಯಿಂದಿರು ॥ ೨ ॥ ಯಾರಾದರು ಕೋಪಿಸಿದರೆ । ತೋರಿಸು ಸಹನವನು ನೀನು ॥ ಓರಗಿತ್ತಿಗೆ ಗೆಳತಿಯಾಗಿ । ಚಾರುಚರಿತೆಯಾಗಿರಮ್ಮ ॥ ೩ ॥

ಸಾವಿತ್ರಿಯು ಗಂಡನ ಮನೆಯಲ್ಲಿದ್ದ ರೀತಿ—

ಸಾಂ॥ ಹಿರಿದಿನ ಬಟ್ಟೆಯನೊಡನೆಯೆ ತೆಗೆದಿಟ್ಟು । ಭರದಿ ನಾರುಡಿಗೆಯನುಟ್ಟು ॥ ಹರುಷದೊಳತ್ತೆಮಾವಂದಿರನೆಲ್ಲ ಸ । ತ್ಕರಿಸುತಿದ್ದಳು ಕಷ್ಟಬಟ್ಟು ॥

ಹೀಗಿರುವಾಗ

ಭೋ|| ಮರಣವಿನ್ನು ನಾಲ್ಕು ದಿನಕೆ | ಬರುವದೆಂದು ಮೂರು ದಿವಸ | ತೊರೆಯುತನ್ನ ನೀರ ವ್ರತವ ಬಿಡದೆ ಹಿಡಿದಳು; || ನೊರಗಬೇಡವೆಂದು ಮಾವ | ನೆರಗನೊಡ್ಡಿ ಬೇಡಲಾಗ | ಮರುಗಬೇಡಿರೆಂದು ಸಮಾಧಾನಗೈದಳು ||

ಈ ವ್ರತದಿಂದ ಅವಳಿಗಾದ ಸ್ಥಿತಿ—

ಕಂ|| ಉಪವಾಸದಿ ದೇಹಂ, ಸ್ಥಿರ | ತಪದಿಂ ಮನಮಂತು ಸೂಕ್ಷ್ಮಮಾಗಿರೆ ಬರುವಾ || ಉಪಮೃತ್ಯುಶತ್ರುವಂತಾ | ನುಪಘಾತಿಸೆ ಸಾಣೆವಿಡಿದ ಬಾಳಿನೆ ತೋರ್ದಳ್ || —(ಸಾ. ದೃ)

ಟಿ|| ಬಾಳ್—ಕತ್ತಿ.

ಹೀಗೆ ಮೂರುದಿನವಾದ ಮೇಲೆ ನಾಲ್ಕನೆಯ ದಿನವಾದರೂ ಬೇಗ ಪಾರಣೆಯನ್ನು ಮಾಡೆಂದು ಮಾವನು ಹೇಳಿದಾಗ ಸಾವಿತ್ರಿ ಉತ್ತರ ಕೊಟ್ಟದ್ದು—

ಶ್ಲೋ|| ಅಸ್ತಂಗತೇ ಮಯಾದಿತ್ಯೇ ಭೋಕ್ತವ್ಯಂ ಕೃತಕಾಮಯಾ; | ಏಷ ಮೇ ಹೃದಿ ಸಂಕಲ್ಪಃ ಸಮಯಶ್ಚ ಕೃತೋ ಮಯಾ || — (ಸಂ. ಭಾರ)

ಅ|| ಸೂರ್ಯನು ಮುಳುಗಿದ ಮೇಲೆ ನನ್ನ ಇಚ್ಛೆಯನ್ನು ಮುಗಿಸಿಕೊಂಡು ನಾನು ಊಟ ಮಾಡತಕ್ಕವಳು. ಹೀಗೆ ನನ್ನ ಮನಸ್ಸಿನಲ್ಲಿದೆ. ಹೀಗೆಂದು ನಾನು ಪ್ರತಿಜ್ಞೆಮಾಡಿದ್ದೇನೆ.

ಆ ನಾಲ್ಕನೆ ದಿನವೇನಾಯಿತೆಂದರೆ—

ಸಾ|| ಅಡವಿಯಿಂದ ಕಟ್ಟಿಗೆಯನು ತರುವೊಡೆ | ಕೊಡಲಿಯ ಹೆಗಲನೊಳಿಟ್ಟು || ನಡೆಯೆ ಸತ್ಯವಂತನು ಸಾವಿತ್ರಿಯು | ನಡೆದಳವನ ಮುಂದಿಟ್ಟು ||

ಆಗ ಸತ್ಯವಂತನೂ ದ್ಯುಮತ್ಸೇನನೂ ಅವಳನ್ನು ಎಷ್ಟು ತಡೆದರೂ ಕೊನೆಗೆ ಅವಳು ಹೇಳಿದ್ದು—

ಶ್ಲೋ|| ಸಂವತ್ಸರಃ ಕಿಂಚಿದೂನೋ ನ ನಿಷ್ಕ್ರಾಂತಾಹಮಾಶ್ರಮಾತ್ | ವನಂ ಕುಸುಮಿತಂ ದ್ರಷ್ಟುಂ ಪರಂ ಕೌತೂಹಲಂ ಹಿ ಮೇ || —(ಸಂ. ಭಾರ)

ಅ|| ನಾನು ಆಶ್ರಮದಿಂದ ಹೊರಗೆ ಕಾಲಿಟ್ಟು ಒಂದು ವರ್ಷದ ಹತ್ತಿರಕ್ಕೆ ಬಂದಿದೆ. ಹೂ ಬಿಟ್ಟಿರುವ ಕಾಡನ್ನು ನೋಡಬೇಕೆಂದು ನನಗೆ ಬಹಳ ಕುತೂಹಲ.

ಎಂದು ಹೇಳಿ ಇಬ್ಬರ ಸಮ್ಮತಿಯನ್ನೂ ಪಡೆದು ಹೊರಟು ದಾರಿಯಲ್ಲಿ ಮರಗಳನ್ನೂ ನೋಡದೆ ಗಂಡನ ಮರಣದ ಚಿಂತೆಯನ್ನೆ ಹಚ್ಚಿಕೊಂಡಿರುವಾಗ ಸತ್ಯವಂತನು ಕಾಡನ್ನು ತಿರುಗಿ ಕಟ್ಟಿಗೆಯನ್ನು ಕೂಡಿಸಿಟ್ಟು ಬಂದು—

ಸಾಂ|| ತಲೆನೋವು ಬಂದಿಹುದೀಗಳೀಗೈವೆನೆಂ | ದೊಲೆದಾಡುತಲ್ಲಿಗೆ ಬಂದು || ಅಲಸಿದ ಸತ್ಯವಂತನು ಹೆಂಡತಿಯ ತೊಡೆ | ಯೊಳು ತಲೆಯಿರೆ ಮಲಗಿದನು ||

ಒಡನೆ ಸಾವಿತ್ರಿಯು ಅದೇ ಅವನ ಮರಣಗಾಲವೆಂದು ನಿರೀಕ್ಷಿಸುತ್ತಿರುವಾಗ ಅವಳ ಕಣ್ಣಿಗೆ ಕಂಡದ್ದು—

ಕ|| ಕೆಂಪುಬಟ್ಟೆಯುಸುಟ್ಟು | ಕೆಂಪುಕಣ್ಣಿನ ತಲೆಗೆ | ಸೊಂಪಾಗಿ ಪಾಗಿಸಿಂ ಸುತ್ತುಗಟ್ಟಿ || ಇಂಪಿನಿಂ ಶ್ಯಾಮರುಚಿ | ಸಂಪೂರ್ಣವಾಗಿರಲು | ತಾಂ ಪಾಶವನು ಹಿಡಿದು ಬಂದ ಯಮನು ||

ಅವನನ್ನು ನೋಡಿ ನೀನು ಯಾರೆಂದು ಕೇಳಿದಾಗ ಯಮನು ಹೇಳಿದ್ದು—

ಶ್ಲೋ|| ಪತಿವ್ರತಾಽಸಿ ಸಾವಿತ್ರಿ, ತಥೈವ ಚ ತಪೋಽನ್ವಿತಾ | ಅತಸ್ತ್ವಾಮಭಿಭಾಷಾಮಿ ; ವಿದ್ಧಿ ಮಾಂ ತ್ವಂ ಶುಭೇ ಯಮಮ್ || —(ಸಂ ಭಾರ)

ಅ|| ಹೆ ಸಾವಿತ್ರಿ, ನೀನು ಪತಿವ್ರತೆಯಾಗಿದ್ದಿ ಮತ್ತು ತಪಸ್ಸು ಮಾಡುತ್ತಿರುವವಳೂ ಆಗಿದ್ದಿ. ಆದ್ದರಿಂದ ನಿನ್ನೊಡನೆ ಮಾತಾಡುತ್ತೇನೆ. ಹೆ ಮಂಗಳಾಂಗಿ, ನನ್ನನ್ನು ಯಮನೆಂದು ತಿಳಿ.

ಇಷ್ಟು ಹೇಳಿ ಸತ್ಯವಂತನನ್ನು ತೆಗೆದುಕೊಂಡು ಹೋಗುವದಕ್ಕೆ ಬಂದಿದ್ದೇನೆಂದು ಕೂಡ ತಿಳಿಸಿದಾಗ ದೂತರ ಕೆಲಸಕ್ಕೆ ನೀನೇಕೆ ಬಂದೆಯೆಂದು ಸಾವಿತ್ರಿ ಕೇಳಿದ್ದಕ್ಕೆ ಯಮನು ಹೇಳಿದ್ದು—

ಕಂ|| ಸಾವಿಗೆ ಬಲಿಯೆನೆ ಬಹರಂ | ಸೇವಕರಂ ಕಳುಹಿಸುತ್ತೆ ಕರೆಯಿಸಿ ಕೊಳ್ವೆಂ || ಪಾವನರೆನಿಸುತೆ ಬಾಳ್ವರ | ಜೀವಗಳಂ ಕೊಳಲು ನಾನೆ ಬರುವೆಂ ತರುಣಿ || — (ಸಾ. ದೃ)

ಹೀಗೆಂದು ಹೇಳಿ—

ಶ್ಲೋ|| ತತಃ ಸತ್ಯವತಃ ಕಾಯಾತ್ಪಾಶಬದ್ಧಂ ವಶಂಗತಮ್ | ಅಂಗುಷ್ಠಮಾತ್ರಂ ಪುರುಷಂ ನಿಶ್ಚಕರ್ಷ ಯಮೋ ಬಲಾತ್ || —(ಸಂ. ಭಾರ)

ಅ|| ಆಮೇಲೆ ಸತ್ಯವಂತನ ಶರೀರದಿಂದ ಪಗ್ಗದ ಕಟ್ಟಿಗೆ ಸಿಕ್ಕಿದ ಹೆಬ್ಬೆರಳಷ್ಟು ಜೀವನನ್ನು ಯಮನು ಬಲಾತ್ಕಾರದಿಂದ ಸೆಳೆದನು.

ದಕ್ಷಿಣದಿಕ್ಕಿಗೆ ಹೊರಟ ಆ ಯಮನನ್ನು ಸಾವಿತ್ರಿಯೂ ಹಿಂಬಾಲಿಸಲು ಆಗ ಯಮನು ಪತಿಯ ಉತ್ತರಕ್ರಿಯೆಯನ್ನು ಮಾಡಹೋಗೆಂದು ಹೇಳಿ ಅವಳಿಗೆ ಸಮಾಧಾನನನ್ನು ಹೇಳಿದ್ದು—

ಮುಖಾರಿ—ಝಂಪೆ

ಆರೇನಮಾಡುವರು? ಆರಿಂದಲೇನಹುದು? | ಪೂರ್ವಜನ್ಮದ ಕರ್ಮ ವಿಧಿ ಬೆನ್ನ ಬಿಡದು || ಪ || ಐದು ವರ್ಷದ ಶಿಶುವು ವನವೆತ್ತ ತಪವೆತ್ತ | ಬಯ್ದು ಮಲತಾಯಿ ಅಡವಿಗೆ ನೂಕಲು || ಸುಯ್ದು ಕೋಪಾಗ್ನಿಯುಲಿ ಪುರ ಪೊರಟು ಪೋಪಾಗ | ತಾಯಿತಂದೆಗಳಿದ್ದು ಏನುಮಾಡಿದರು? || ೧ || ಪಾಪಿ ದುಃಶಾಸ ದ್ರೌಪದಿಯ ಸೀರೆಯ ಸೆಳೆದು | ಕೋಪದಿಂ ಮಾನಭಂಗವ ಮಾಡಲು || ಆಪತ್ತು ಬಂದಾಗ ಅರಚಿದಾ ಕಾಲದಲಿ | ಭೂಪತಿಗಳೈವರಿದ್ದೇನು ಮಾಡಿದರು? || ೨ || ರಣದೊಳಗೆ ಅಭಿಮನ್ಯು ಚಕ್ರವ್ಯೂಹವ ಪೊಕ್ಕು | ಸೆಣಸಿ ಷಡುರಥರೊಡನೆ ಹೊಯ್ದಾಡಲು || ಅಣಕವಿಲ್ಲದೆ ಕಾದುತಸುವಳಿದು ಪೋಪಾಗ | ತ್ರಿಣಯ ಸಖಪಾರ್ಥರಿದ್ದೇನು ಮಾಡಿದರು? || ೩ || ನೃಪರೊಳಗೆ ಅತಿಶೂರ ಬಲವಂತ ಶ್ರೀರಾಮ | ಅಪರಿಮಿತಸಹಸಿ ಲಕ್ಷ್ಮಣದೇವರು ; || ಚಪಲಾಕ್ಷಿ ಸೀತೆಯನು ಖಳನು ಕದ್ದೊಯ್ವಾಗ | ಅಪರಿಮಿತ ವೀರರಿದ್ದೇನ ಮಾಡಿದರು? || ೪ ||

ಬ್ರಹ್ಮಶರ ಶಿವನ ಶಿರವನು ಕಚ್ಚಿ ಕಾಡುತಿರೆ | ಸುಮ್ಮನೇ ಜಗವೆಲ್ಲ ತಿರುಗುತಿರಲು || ರಮ್ಯಮೂರುತಿಯಾದ ಪುರಂದರ ವಿಠಲನೆ | ನಿಮ್ಮ ಆಜ್ಞೆಯ ಮೀರಿ ಬದುಕಿ ಬಾಳುವರೆ? || ೫ || —(ದಾ.)

ಆಗ ಸಾವಿತ್ರಿಯು ಇನ್ನೂ ಹಿಂದೆಯೇ ಹೊರಟು ಯಮನಿಗೆ ಹೇಳಿದ್ದು—

ಕ|| ಪತಿಯೊಡನಿರುವದು | ಪತಿವ್ರತೆಯರ ಧರ್ಮ ; || ಪತಿಯೊಡನೈತರುತಿಹೆ ನಾನು ; || ವ್ರತವಿದಕಿನ್ನುಪ | ಹತಿಯನೆಸಗುವರೆ! | ನುತಿಸುವೆ ಪೊರೆಯೆನ್ನನು ನೀನು ||

ಈ ಮನೋಭಾವಕ್ಕೆ ತುಷ್ಟನಾದ ಯಮನು ಗಂಡನ ಹೊರತು ಬೇಕಾದ್ದನ್ನು ಬೇಡೆನ್ನಲು ಸಾವಿತ್ರಿ ಬೇಡಿದ್ದು—

ಶ್ಲೋ|| ಚ್ಯುತಃ ಸ್ವರಾಜ್ಯಾದ್ವನವಾಸಮಾಶ್ರಿತೋ | ವಿನಷ್ಟಚಕ್ಷುಃ ಶ್ವಶುರೋ ಮಮಾಶ್ರಮೇ || ಸ ಲಬ್ಧಚಕ್ಷುರ್ಬಲವಾನ್ಭವೇನ್ನೃಪ | ಸ್ತವ ಪ್ರಸಾದಾಜ್ಜ್ವಲನಾರ್ಕಸನ್ನಿಭಃ || —(ಸಂ. ಭಾರ)

ಅ|| ರಾಜ್ಯವನ್ನು ಕಳೆದುಕೊಂಡು ಕಾಡಿನಲ್ಲಿದ್ದುಕೊಂಡು ಕಣ್ಣುಕಾಣದೆ ಆಶ್ರಮದಲ್ಲಿರುವ ನಮ್ಮ ಮಾವನು ನಿನ್ನ ಪ್ರಸಾದದಿಂದ ದೃಷ್ಟಿಪಾಟವವನ್ನು ಪಡೆದು ಬಲಶಾಲಿಯಾದ ರಾಜನಾಗಿ ಉರಿಯುವ ಬೆಂಕಿಯಂತೆ ಕಾಂತಿಯುಳ್ಳವನಾಗಲಿ.

ಹಾಗೆಯೇ ಆಗಲೆಂದು ಯಮನು ಮುಂದೆ ಸಾಗುತ್ತ ಸಾವಿತ್ರಿಯನ್ನು ಹಿಂದಿರುಗಹೇಳಲು ಸಾವಿತ್ರಿ ಹೇಳಿದ್ದು—

ಸಾ|| ದೊರಕಿರೆ ಸತ್ಪುರುಷರ ಸಹವಾಸವು | ತೊರೆವೆನದನು ? ತಾನೆಂತು|| ಬರುವೆನು ನಿಮ್ಮಯ ಹಿಂಗಡೆ ತಪ್ಪದೆ | ತಿರುಗಿಸುವರೆ ನೀವೆಂತು ? ||

ಆ ಮಾತಿಗೆ ಸಂತೋಷಿಸಿ ಯಮನು ಮತ್ತೊಂದು ವರವನ್ನು ಬೇಡೆನ್ನಲು ಸಾವಿತ್ರಿ ಬೇಡಿದ್ದು—

ಶ್ಲೋ|| ಹೃತಂ ಪುರಾ ಮೇ ಶ್ವಶುರಸ್ಯ ಧೀಮತಃ | ಸ್ವಮೇವ ರಾಜ್ಯಂ ಲಭತಾಂ ಸ ಪಾರ್ಥಿವಃ || ಜಹ್ಯಾತ್ಸ್ವಧರ್ಮಾನ್ನ ಚ ಮೇ ಗುರುರ್ಯಥಾ | ದ್ವಿತೀಯಮೇತದ್ವರಯಾಮಿ ತೇ ವರಮ್ || —(ಸಂ. ಭಾರ)

ಅ|| ಬುದ್ಧಿವಂತನಾದ ನಮ್ಮ ಮಾವನು ಮೊದಲು ಕಳೆದುಕೊಂಡಿರುವ ತನ್ನ ರಾಜ್ಯವನ್ನು ಪಡೆಯಲಿ ಮತ್ತು ತನ್ನ ಧರ್ಮವನ್ನು ತಪ್ಪದೆ ಇರಲಿ. ಇದೇ ನಾನು ಕೇಳುವ ಎರಡನೆ ವರ.

ಅದಕ್ಕೂ ಆಗಲೆಂದು ಹೇಳಿ ಯಮನು ಮುಂದೆ ಸಾಗುತ್ತ ಸಾವಿತ್ರಿಯನ್ನು ಹಿಂದಿರುಗ ಹೇಳಲು ಸಾವಿತ್ರಿ ಹೇಳಿದ್ದು—

ಕಂ|| ಶರಣು ಬಂದವರನ್ನು ಕರುಣಾಳು ಸಜ್ಜನರು | ತೊರೆಯರೆಂಬರು ನೀತಿಶಾಸ್ತ್ರವಿದರು ; || ನೆರೆ ಧರ್ಮರಾಜನಾ | ಗಿರುವ ನೀನೇ ಎನ್ನ | ತೊರೆವನಾದೊಡೆ ಮತ್ತೆ ಪೊರೆವರಾರು ? ||

ಆ ಮಾತಿಗೆ ಸಂತೋಷಿಸಿ ಯಮನು ಮತ್ತೊಂದು ವರವನ್ನು ಬೇಡೆನ್ನಲು ಸಾವಿತ್ರಿ ಬೇಡಿದ್ದು—

ಶ್ಲೋ॥ ಮಮಾನಪತ್ಯಃ ಪೃಥಿವೀಪತಿಃ ಪಿತಾ ;। ಭವೇತ್ಪಿತುಃ ಪುತ್ರಶತಂ ತಥೌರಸಮ್ ; ॥ ಕುಲಸ್ಯ ಸಂತಾನಕರಂ ಚ ಯದ್ಭವೇ। ತೃತೀಯಮೇತದ್ವರಯಾಮಿ ತೇ ವರಮ್ ॥ —(ಸಂ. ಭಾರ)

ಅ॥ ರಾಜನಾದ ನಮ್ಮ ತಂದೆಗೆ ಗಂಡುಮಕ್ಕಳಿಲ್ಲ. ಅವನ ಹೊಟ್ಟೆಯಲ್ಲಿ ಕುಲವನ್ನು ಬೆಳೆಸುವಂಥ ನೂರು ಗಂಡುಮಕ್ಕಳಾಗಲಿ. ಇದೇ ನಾನು ಕೇಳುವ ಮೂರನೆ ವರ.

ಅದಕ್ಕೂ ಆಗಲೆಂದು ಹೇಳಿ ಯಮನು ಮುಂದೆ ಸಾಗುತ್ತ ಸಾವಿತ್ರಿಯನ್ನು ಹಿಂದಿರುಗ ಹೇಳಲು ಸಾವಿತ್ರಿ ಹೇಳಿದ್ದು—

ಸಾಂ॥ ಸಾಡಾಡಿಯಂಹ ಹಿತಚಿಂತಕರೊಡನೆಯೆ । ರೂಢಿಗೊಳ್ಳುವದು ವಿಶ್ವಾಸ ; ॥ ನಾಡೆ ಸಜ್ಜನರೊಳಗನ್ಯೇನ ಹೇಳಲಿ ? । ನೋಡಲದರೊಳು ವಿಶೇಷ ॥

ಆ ಮಾತಿಗೆ ಸಂತೋಷಿಸಿ ಯಮನು ಮತ್ತೊಂದು ವರವನ್ನು ಬೇಡೆನ್ನಲು ಸಾವಿತ್ರಿ ಬೇಡಿದ್ದು—

ಶ್ಲೋ॥ ಮಮಾತ್ಮಜಂ ಸತ್ಯವತಸ್ತಥೌರಸಂ । ಭವೇದುಭಾಭ್ಯಾಮಿಹ ಯತ್ಕುಲೋದ್ವಹಮ್ ॥ ಶತಂ ಸುತಾನಾಂ ಬಲವೀರ್ಯಶಾಲಿನಾ । ಮಿಮಂ ಚ ತುರ್ಥಂ ವರಯಾಮಿ ತೇ ವರಮ್ ॥ —(ಸಂ. ಭಾರ)

ಅ॥ ಸತ್ಯವಂತನಿಂದ ನನ್ನ ಹೊಟ್ಟೆಯಲ್ಲಿ ನಮ್ಮ ಕುಲಕ್ಕನುರೂಪರಾದ ಮತ್ತು ಬಲವೀರ್ಯ ಶಾಲಿಗಳಾದ ನೂರು ಗಂಡುಮಕ್ಕಳಾಗಲಿ. ಇದೇ ನಾನು ಕೇಳುವ ನಾಲ್ಕನೆ ವರ.

ಅದಕ್ಕೂ ಆಗಲೆಂದು ಹೇಳಿ ಯಮನು ಮುಂದೆ ಸಾಗುತ್ತ ಸಾವಿತ್ರಿಯನ್ನು ಹಿಂದಿರುಗ ಹೇಳಲು ಸಾವಿತ್ರಿಯು ಪತಿಯನ್ನು ಬಿಟ್ಟು ಹೋಗಿ ಸಂತತಿಯನ್ನು ಪಡೆಯುವದಾಗುವದಿಲ್ಲವಾದ್ದರಿಂದ ಸತ್ಯವಂತನನ್ನು ಬಿಟ್ಟು ಆಡಿದ ಮಾತನ್ನುಳಿಸಬೇಕೆಂದು ಹೇಳಿದ್ದು—

ಭಾ॥ ಕ್ಷಿತಿರಸಾತಲಕಿಳಿದರೆಯು, ಪ । ರ್ವತಗಳಲ್ಲಾಡಿದರು, ಸೂರ್ಯನ । ಗತಿಯು ನಿಂತರು, ಜಗದಿ ಸುಜನರ ಧರ್ಮಪರ್ತನೆಗೆ ॥ ಚ್ಯುತಿಯು ಬಾರದು । ಸಜ್ಜನರ ಸಂ । ಗತಿಯುದೆಂದಿಗು ವಿಫಲವಾಗದು ; । ಹಿತವ ಮಾಡುವುದಿಹಪರಂಗಳೊಳೆಂದಳಾ ಸಾಧ್ವೀ ॥ —(ಸಾ. ಚ)

ಈ ಮಾತಿಗೆ ತುಷ್ಟನಾಗಿ ಯಮನು ಸತ್ಯವಂತನ ಕಟ್ಟನ್ನು ಕಳಚಿಬಿಟ್ಟು ಹೇಳಿದ್ದು—

ವೃ॥ ರವಿಯಾಕಾಶಕೆ ಭೂಷಣಂ ; ರಜನಿಗಂ ಚಂದ್ರಂ ಮಹಾಭೂಷಣಂ । ಕುವರಂ ವಂಶಕೆ ಭೂಷಣಂ ; ಸರಸಿಗಂಭೋಜಾತಗಳ್ ಭೂಷಣಂ ; ॥ ಹವಿಯುಜ್ವಾಳಿಗೆ ಭೂಷಣಂ ; ಸತಿಗೆ ಪಾತಿವ್ರತ್ಯವೇ ಭೂಷಣಂ ;। ಕವಿಯಾಸ್ಥಾನಕೆ ಭೂಷಣಂ ; ಹರಹರಾ! ಶ್ರೀ ಚೆನ್ನಸೋಮೇಶ್ವರ ॥ —(ಸೋ. ಶ)

ಈ ಪ್ರಕಾರ ಯಮನ ಅನುಗ್ರಹವನ್ನು ಹೊಂದಿ ಬಂದು ಸಾವಿತ್ರಿಯು—

ಭೋ॥ ಪತಿಯ ದೇಹವನ್ನು ಬೇಗ। ಸತಿಯು ತೊಡೆಯೊಳಿಟ್ಟುಕೊಂಡು, ಹಿತದೊಳವನ ಜೀವಿತವ ನಿರೀಕ್ಷಿಸುತ್ತಿರೆ॥ ಕ್ಷಿತಿಪಸುತನು ನಿದ್ರೆ ತಿಳಿದ। ಗತಿಯ ತೋರಿ ತನ್ನ ಸಳೆದ । ಪೃಥುಶರೀರನೆಲ್ಲೆಸುತ್ತೆ ಕೇಳ್ದನಿನಿಯಳ ॥

ಅದಕ್ಕೆ ಸಾವಿತ್ರಿಯು ಮುಂದೆ ಹೇಳುತ್ತೇನೆಂದು ಪ್ರಕೃತವನ್ನು ಹೇಳಿದ್ದು—

ಕೀ|| ಹೊತ್ತಾಯಿತು ರಾತ್ರಿಯೊಳೀಗಲೆ ಬಲು | ಕತ್ತಲೆ ; ಸರಿಗಳು ಕೂಗುತಿವೆ ; || ಅತ್ತೆಮಾವ ಹುಡುಕುತ ಬಹ ಮೊದಲೇ | ಅತ್ತ ಹೋಗಲು ತ್ತವು ನಾವೇ ||

ಹೀಗೆ ಅವರು ಹೊರಡುವ ಹೊತ್ತಿಗೆ ದ್ಯುಮತ್ಸೇನನು ದೃಷ್ಟಿಪಾಟವವನ್ನು ಹೊಂದಿ ಮಗನನ್ನೂ ಸೊಸೆಯನ್ನೂ ಹುಡುಕಿಕೊಂಡು ಬರುತ್ತ-

ಭಾ|| ತರಗೆಲೆಯು ಗಿರುಕೆನಲು ಗಕ್ಕನೆ | ತಿರುಗಿನೋಳ್ಪರದೆಲ್ಲಿರುವೆ ಬಾ | ತರಳ, ನೊಗದೋರೆಂದು ಪಲತೆರದಿಂದೆ ಹಲುಬುತಲಿ || ಮರುಗುವರು ; ಕಳವಳಿಸುವರು ; ಕಾ | ತರಿಸುವರು ; ತೊದಲುವರು ; ತನುಭವ | ನಿರುವ ನೆಲೆಯನು ಕಾಣದಾ ದಂಪತಿಗಳಡಿಗಡಿಗೆ || —(ಸಾ. ಚ)

ನಡುವೆಯೇ ಸಾವಿತ್ರಿಸತ್ಯವಾನರನ್ನು ಕಂಡು ಸಾವಿತ್ರಿಯಿಂದ ಎಲ್ಲ ವೃತ್ತಾಂತವನ್ನೂ ತಿಳಿಯುತ್ತಲೆ —

ಭಾ|| ಕಂದ, ಬಂದೈ ! ಪ್ರೇಮರಸದು | ಕ್ಕಂದ, ಬಂದೈ ! ಹೃದಯಪಿಕಮಾ | ಕಂದ, ಬಂದೈ ! ಸತಿಸೆರಸಿ ನೀನೆಂದು ಸಂತಸದಿ || ಸಂದಸನಿಕ್ಕೈಗಳಿಂದಾ | ನಂದ ಮಿಗೆ ತಕ್ಕೈಸಿ ತೃಪ್ತಿಯ | ಹೊಂದಿದರು ಚಿತ್ತದೊಳಗಾತನ ತಾಯಿತಂದೆಗಳು || —(ಸಾ. ಚ)

ಟಿ|| ಉಕ್ಕಂದ–ತುಂಬಿ ಹರಿಯುವ ಪ್ರವಾಹ. ಹೃದಯಪಿಕಮಾಕಂದ–ಹೃದಯವೆಂಬ ಕೋಗಿಲೆಗೆ ಮಾವಿನ ಮರದಂತಿರುವವನೆ.

ಆಮೇಲೆ ದ್ಯುಮತ್ಸೇನನು ಸಾವಿತ್ರಿಯನ್ನು ಶ್ಲಾಘಿಸಿದ್ದು—

ಕಂ|| ಇಲ್ಲದುದಾವುದು ಮನೆಯೊಳ್ | ಸಲ್ಲಲಿತಗುಣಾಪತಂಸೆಯಾದೊಡೆ ನಲ್ಲಳ್ ! || ಎಲ್ಲಮುಮಿರ್ದುಂ ನಲ್ಲಳ್ | ಪೊಲ್ಲಳ್ ತಾನಾದೊಡುಳ್ಳುದಾವುದು ಮನೆಯೊಳ್ ? || —(ನೀ. ಮಂ)

ಇದೇ ಅಭಿಪ್ರಾಯವನ್ನೇ ದೊಡ್ಡವರು ಹೇಳಿರುವದೇನೆಂದರೆ—

ತ್ರಿ|| ಮಾಳಿಗೆಯ ಮನೆ ಲೇಸು ; ಗೂಳಿರುವ ಪಶು ಲೇಸು ; | ಈಳೆಯ ಹಿತ್ತಲಿರಲೇಸು ; ಪತಿವ್ರತೆಯ | ಬಾಳು ಲೇಸೆಂದ ಸರ್ವಜ್ಞ || —(ಸ. ಪ)

ಟಿ|| ಈಳೆಯ–ಕಿತ್ತಿಳೆಯ ಮರವಿರುವ.

ಹೀಗೆ ಎಲ್ಲರೂ ಆನಂದಪಡುತ್ತಿರುವಲ್ಲಿ ಸಾಲ್ವದೇಶದ ಪ್ರಜೆಗಳು ಬಂದು ಕಣ್ಣುಬಂದಿರುವ ದ್ಯುಮತ್ಸೇನನನ್ನು ತಾವಾಗಿಯೇ ಕರೆದುಕೊಂಡುಹೋಗಿ ಸಿಂಹಾಸನದ ಮೇಲೆ ಕೂಡಿಸಿ ಸತ್ಯವಂತನಿಗೆ ಯುವರಾಜಪಟ್ಟವನ್ನು ಕಟ್ಟಿ ಸಾವಿತ್ರಿಯ ಪಾತಿವ್ರತ್ಯಪ್ರಭಾವಕ್ಕೆ ಬೆರಗಾಗಿದ್ದಾರೆ. ಇದನ್ನು ನೋಡಿಯೇ ಕೀರ್ತನಾರಂಭದಲ್ಲಿ ಭಾಗವತೋತ್ತಮರು "ಗುಣವನೆ ನೀ ನೋಡುವಳಾಗು" ಎಂದು ಮುಂತಾಗಿ ಉಪದೇಶಮಾಡಿರುವರು.

---

# ಗರುಡನ ಮಾತೃಭಕ್ತಿ

## ಪೀಠಿಕೆ—ಮಾತೃಭಕ್ತಿ

ಕೇದಾರಗೌಳ—ಅಟತಾಳ

ಮಾಡು ತಪ್ಪದೆ । ಮನುಜ । ಮಾತೃಭಕ್ತಿಯ ॥ ಪ ॥ ಮಾಡಲು ನೀ ಮಾತೃಭಕ್ತಿಯ । ಕೂಡಲೆ ಹರಿಯೊಲಿಪ ನಿನಗೆ ॥ ಅ. ಪ ॥ ತಾಯ ದುಃಖವ ಕೇಳಲೊಡನೆ । ಗಾಯವಾಗಬೇಕು ಮನಕೆ ; ॥ ಹಾ ! ಎಂದದ ನೀಗಬೇಕು । ಆಯಾಸವ ಮನಕೆ ತರದೆ ॥ ೧ ॥

ಜಗತ್ತಿನಲ್ಲಿ ತಮಗೆ ದೇವರು ಕಣ್ಣಿಗೆ ಕಂಡರೆ ಬೇಕಾದ ಹಾಗೆ ಪೂಜಿಸುತ್ತೇವೆಂದು ಹೇಳುವ ಜನರನ್ನು ಕುರಿತು ಪೂರ್ವಿಕರು ಉಪದೇಶಿಸುವದೇನೆಂದರೆ—

ಶ್ಲೋ॥ ಮಾತೃತೋಽನ್ಯೋ ನ ದೇವೋಽಸ್ತಿ ; ತಸ್ಮಾತ್ಪೂಜ್ಯಾ ಸದಾ ಸುತೈಃ ॥ —(ಪಿ. ಪು)

ಅ॥ ತಾಯಿಗಿಂತ ಬೇರೆ ದೇವರಿಲ್ಲ. ಆದ್ದರಿಂದ ಮಕ್ಕಳು ಯಾವಾಗಲೂ ತಾಯಿಯನ್ನು ಆರಾಧಿಸಬೇಕು.

ಒಬ್ಬ ಭಕ್ತನು ತಾಯಿಗೆ ಸಮಾನವಿಲ್ಲವೆಂದು ನೆನಸಿಕೊಂಡಿರುವದೇನೆಂದರೆ—

ಭಾ॥ ನೋಡ ಹೊಲಸಾದೆನ್ನ ಮುಖವನು । ನೋಡಿ ನೋಡುತ ಪೂರ್ಣ ಚಂದ್ರನ । ನೋಡಿದಂತಾನಂದದನುಭವವನ್ನು ತೋರುತ್ತ ॥ ಗಾಢಮಮತೆಯೊಳೆನ್ನ ಮುದ್ದಿಸಿ । ಪಾಡುತಲೆ ಹರ್ಷದಲಿ ಕಿರುನಗೆ । ಮೂಡೆ ತೋರಿದ ನಿನ್ನ ಬಗೆಗಿನ್ನಾವುದೆಣೆ ಜಗದೊಳ್ ? ॥ —(ಪ. ಸ್ತು)

ಸಾಮಾನ್ಯವಾಗಿ ಜಗತ್ತಿನಲ್ಲಿ ಹೆಂಡಿರು ಬಹಳ ಮೋಹಕರಾಗಿದ್ದರೂ ಅರಣ್ಯದಲ್ಲಿ ಸೀತೆಯೊಡನಿದ್ದ ಶ್ರೀರಾಮನ ಬಾಯಿಂದ ಬಂದಿರುವದೇನೆಂದರೆ—

ಶ್ಲೋ॥ ಮಾತೃಭಿಶ್ಚಿಂತ್ಯಮಾನಾನಾಂ ತೇ ಹಿ ನೋ ದಿವಸಾ ಗತಾಃ ॥
—(ಶ್ರೀ. ರಾ)

ಅ॥ ನಮ್ಮ ಯೋಗಕ್ಷೇಮವನ್ನು ತಾಯಿಯರು ನೋಡಿಕೊಳ್ಳುವ ಆ ದಿವಸಗಳು ಹೋದವು.

ತಾಯ ವಿಷಯದಲ್ಲಿ ನೀತಿಶಾಸ್ತ್ರಕಾರರು ಹೇಳಿರುವದೇನೆಂದರೆ—

ಶ್ಲೋ॥ ನ ಹಿ ಮಾತೃಸಮೋ ಬಂಧುಃ ; ನ ಗುರುರ್ಮಂತ್ರದಾತ್ಪರಮ್।
—(ಸು)

ಅ॥ ತಾಯಿಗೆ ಸಮಾನವಾದ ಬಂಧುವಿಲ್ಲ. ಮಂತ್ರದ ಉಪದೇಶವನ್ನು ಕೊಟ್ಟವರಿಗಿಂತ ಹೆಚ್ಚಿನ ಗುರುವಿಲ್ಲ.

ಆದ್ದರಿಂದ ಸತ್ಪುತ್ರನು ತಾಯಿಯ ಯೋಗಕ್ಷೇಮವನ್ನು ಚೆನ್ನಾಗಿ ನೋಡಬೇಕು. ಈ ಸಂದರ್ಭದಲ್ಲಿ ಒಬ್ಬನು ಭೂದೇವಿಯೆಂಬ ತಾಯಿಯ ಯೋಗಕ್ಷೇಮವನ್ನು ವಿಚಾರಿಸಿರುವದು ಅನುಸಂಧಾನಕ್ಕೆ ಯೋಗ್ಯವಾಗಿದೆ. ಅದೇನೆಂದರೆ—

ಮುಖಾರಿ—ಝಂಪೆ

ಏಕೆ ನಡುಗಿದೆ ತಾಯೆ ಭೂಮಿ, ನಡುರಾತ್ರಿಯೊಳು? । ಪೊಡವಿಗೊಡೆಯನ ರಾಣಿ, ಪರಮಕಲ್ಯಾಣಿ ॥ ಪ ॥ ಗುರುಹಿರಿಯರನು ಕಂಡು ಮುರುಕಿಸುವ ಮೋರೆಯನು । ಅರೆಮತಿಗಳಿಂದಂಗ ಭಾಷೆಗಳ ಮಾಡಿ ॥ ಚರಣಕೆರಗದ ಮನುಜರಿರಬಾರದೆಂದೆನುತ । ಮರಮುರಿದು ಒರಗಿ ಸಾಯಲಿ ಎಂದು ನಡುಗಿದೆಯ? ॥ ೧ ॥ ಉತ್ತಮರ ಹೊಟ್ಟೆಯೊಳು ಬಗುಳುಶ್ವಾನನು ಹುಟ್ಟಿ । ಹೆತ್ತವರ ನಿರ್ಬಂಧಕೊಳಗುಮಾಡಿ ॥ ಅತ್ತೆಮಾವನ ಕೀರ್ತಿಕೊಂಡಾತದಧಮರ । ಹೆತ್ತಿರಲಾರೆನೆಂದು ಮತ್ತೆ ನಡುಗಿದೆಯ ? ॥ ೨ ॥ ಕಳ್ಳತನವನು ಕಲಿತು ಕಾಲೋಚಿತವ ಕೇಳ್ದು । ಸುಳ್ಳು ಮಾತುಗಳಾಡಿ ಒಡಲ ಪೊರೆವಾ ॥ ಜಳ್ಳುತನದಲಿ ತನ್ನ ಅವಗುಣಂಗಳ ಬಿಡದ । ಸುಳ್ಳುಮನುಜರು ಹೊರೆನೆಂದು ನಡುಗಿದೆಯ ? ॥ ೩ ॥ ಮುರಹರನ ಸ್ಮರಣೆಯನು ಮಾಡದೇ ಕಲಿಯುಗದಿ । ಪರಭಕ್ತಿಯಿಂದ ಶಾಸ್ತ್ರವ ನೋದದೆ ॥ ತರುಣಿಯರ ಮೇಲೆ ದೃಷ್ಟಿಯನಿಡುವ ಹೊಲೆಯರನು । ಹೊರಲಾರೆನೆಂದು ನೀನೊಲಿದು ನಡುಗಿದೆಯ ? ॥ ೪ ॥ ಧರೆಯೊಳಗೆ ಕರ್ಮಿಗಳು ಹೆಚ್ಚಿ ಕವಿತ್ವವ ಕಲಿತು । ನರಗುರಿಗಳೆಲ್ಲ ನಡೆಗೆಟ್ಟರೆಂದು ॥ ಗುರುವೆ ಕೇಳಯ್ಯ ಕನಕಪ್ರಿಯಾ ತಿರುಪತಿಯ । ಗಿರಿಯಾದಿಕೇಶವನೆ ಒಲಿದು ನಿಲ್ಲಿಸಿದ ॥ ೫ ॥ —(ದಾ)

ಟಿ॥ ಕರ್ಮಿಗಳು—ಪಾಪಿಗಳು. ಕವಿತ್ವವ—ತಮ್ಮ ನಡೆವಳಿಕೆಯೇ ಯೋಗ್ಯವೆಂದು ಸಾಧಿಸುವ ಜಾಣ್ಮೆಯನ್ನು.

ಇದರಿಂದ ತಮ್ಮ ಮಕ್ಕಳು ಹೇಗಿರಬೇಕೆಂಬ ತಾಯಿಯರ ಉದ್ದೇಶವು ವ್ಯಕ್ತವಾಗುತ್ತದೆ. ತಾಯಿಯರಲ್ಲಿ ಇರುವ ಇಂಥ ಒಳ್ಳೆ ಉದ್ದೇಶಗಳೇ ಮಕ್ಕಳೊಳಕ್ಕೆ ಇಳಿದು ಬಂದಿರುವದೆಂತೆಂದರೆ—

ಶ್ಲೋ॥ ಸುಶೀಲೋ ಮಾತೃಪುಣ್ಯೇನ ಪಿತೃಪುಣ್ಯೇನ ಚಾತುರಃ॥ —(ಸು)

ಅ॥ ತಾಯಿ ಪುಣ್ಯದಿಂದ ಒಳ್ಳೆ ಆಚಾರವಂತನಾಗುತ್ತಾನೆ; ತಂದೆಯ ಪುಣ್ಯದಿಂದ ಚತುರನಾಗುತ್ತಾನೆ.

ಇದೇ ಅಭಿಪ್ರಾಯವನ್ನು ಕುರಿತು ಒಬ್ಬ ಕವಿ ಹೇಳಿರುವದೇನೆಂದರೆ—

ಶ್ಲೋ॥ ಜಾನೀಮಹೇ ಜಗತಿ ಜಂತುಜನಸ್ಯ ನೂನಮ್ । ಯೋನಿಸ್ವಭಾವಸದೃಶೀ ಭವತಿ ಕ್ರಿಯೇತಿ ; ॥ ಲಬ್ಧ್ವಾಪಿ ವಕ್ಷಸಿ ಪದಂ ಜಲರಾಶಿಕನ್ಯಾ । ಶ್ರೀವಾಸುದೇವಚರಣಪ್ರವಣೈವ ನಿತ್ಯಮ್ ॥ —(ಸು. ಲಾ)

ಅ॥ ಜಗತ್ತಿನ ಜನರಿಗೆಲ್ಲ ವಿಶೇಷವಾಗಿ ತಂದೆತಾಯಿಗಳಿಗನುಗುಣವಾದ ಪ್ರವೃತ್ತಿಯೇ ಉಂಟಾಗುತ್ತದೆ. ಸಮುದ್ರರಾಜನ ಮಗಳಾದ ಲಕ್ಷ್ಮಿಯನ್ನು ವಿಷ್ಣು ಎದೆಯಲ್ಲಿಟ್ಟುಕೊಂಡರೂ ಅವಳು

ಅವನ ಪಾದಸೇವೆಯಲ್ಲಿಯೇ ಇದ್ದಾಳೆ. (ಕೆಳಗಡೆಗೆ ಹರಿಯುವದೇ ನೀರಿನ ಸ್ವಭಾವವಾದ್ದರಿಂದ ಲಕ್ಷ್ಮಿಯು ಅಧೋಗತಿಯನ್ನು ಹಿಡಿಯದೆ ಹೇಗಿದ್ದಾಳು!)

ಮಕ್ಕಳ ವಿಷಯಕವಾದ ತಾಯಿ ಮನೋಭಾವವನ್ನು ಒಬ್ಬ ಕವಿ ಹೊರಗೆಡವಿರುವದೇನೆಂದರೆ-

ಶ್ಲೋ॥ ವರಂ ಗರ್ಭಸ್ರಾವೋ ; ವರಮೃತುಷು ನೈವಾಭಿಗಮನಮ್ ; । ವರಂ ಜಾತಪ್ರೇತೋ; ವರಮಪಿ ಚ ಕನ್ಯೈವ ಜನಿತಾ; ॥ ವರಂ ವಂಧ್ಯಾ ಭಾರ್ಯಾ; ವರಮಪಿ ಚ ಗರ್ಭೇಷು ವಸತಿ ; । ನಚಾವಿದ್ವಾನ್ ರೂಪದ್ರವಿಣಗುಣಯುಕ್ತೋSಪಿ ತನಯಃ ॥ —(ಸು)

ಅ॥ ಹುಟ್ಟಿದ ಮಗನು ರೂಪು, ಹಣ, ಗುಣ—ಇವುಗಳೆಲ್ಲ ಇದ್ದರೂ ತಿಳಿವಳಿಕೆ ಇಲ್ಲದವನಾಗುವದಕ್ಕಿಂತಲೂ ಬಸಿರಿಳಿದು ಹೋದರೆ ಒಳ್ಳೇದು; ಋತುಕಾಲದಲ್ಲಿ ಗಂಡಹೆಂಡಿರು ಸೇರದಿರುವದೊಳ್ಳೆಯದು. ಸತ್ತ ಮಗು ಹುಟ್ಟುವದಾದರೂ ಒಳ್ಳೆಯದು; ಹೆಣ್ಣು ಹುಟ್ಟಿದರೂ ಒಳ್ಳೆಯದು; ಹೆಂಡತಿ ಬಂಜೆಯಾದರೂ ಒಳ್ಳೆಯದು ಅಥವಾ ಬಸಿರಲ್ಲಿಯೇ ಉಳಿದು ಹೋದರೂ ಒಳ್ಳೆಯದು.

ಇಂಥ ತಾಯಿ ಇಚ್ಛೆಯನ್ನು ಹೇಗೆ ಪೂರ್ಣಮಾಡೇನೆಂದು ನಿರಾಶೆಯಾಗದಿರುವಂತೆ ಭಗವದ್ಭಕ್ತರು ಉಪದೇಶಿಸಿರುವದೇನೆಂದರೆ—

ಮುಖಾರಿ—ಝಂಪೆ

ಬರಿದೆ ಚಿಂತಿಸಬೇಡ ಮನವೆ ಭಯಗೊಂಡು ; । ಹರಿಯೆಂಬುವ ನಮ್ಮಲ್ಲಿ ಸ್ಥಿರವಾಗಿಯುಂಟು ॥ ಪ ॥ ಕೊಲ್ಲುವನೊ ಕಾವನೋ ನಿಲ್ಲುವನೊ ಪೋಗುವನೊ। ಬಲ್ಲನೋ ಅರಿಯನೋ ಇದನೆಲ್ಲವೆನುತ ॥ ಸೊಲ್ಲುಸೊಲ್ಲಿಗೆ ಕರೆದು ಎಲ್ಲವನು ತಿಳುಹಿದರೆ । ಕಲ್ಲಾಗುವನೆ ಸ್ವಾಮಿ ಜಗದ ವಲ್ಲಭನು? ॥ ೧ ॥ ಕರಿರಾಜ, ಧ್ರುವನು, ಪ್ರಹ್ಲಾದ, ದ್ರೌಪದಿದೇವಿ, । ಮುರವಿನೊಳಜಾಮಿಳನು ಕರೆಯಲಾಗಿ ॥ ಪೊರೆಯ ಲಾಲಿಸಿ ತಾಯಿ ಕರುವನರಸುವ ತೆರದಿ । ಬರಲಿಲ್ಲವೇ ಸ್ವಾಮಿಯುರಗಗಿರಿವಾಸ? ॥ ೨ ॥ ಗರ್ಭದೊಳಗಿರುವಾಗ ಹಬ್ಬಿರುವ ಮಾಂಸಲತೆ। ಉಬ್ಬಸವ ಬಡುತಿರಲು ಅಬ್ಬೆ ಸಲಹಿದಳೇ? ॥ ಉಬ್ಬರದ ನೋವಿನೊಳು ಒಬ್ಬನೇ ಬರುವಾಗ । ಹೆಬ್ಬಾಗಿಲನು ಮುಂದೆ ತೆರೆದವರದಾರೋ? ॥ ೩ ॥ ಮಡದಿಮಕ್ಕಳನೆಲ್ಲ ಒಡಗೊಂಡು ಮಲಗಿರಲು । ಕಡೆಸಾರ ಬಂದವಳ ಕಾಲು ಸುತ್ತಿ ॥ ನಡುವಿರುಳು ಹಿಡಿದಿರ್ದ ಹೆಡತಲೆಯ ಮೃತ್ಯುವನು। ಬಿಡಿಸಿ ಸಲಹಿದರ್ಯಾರು? ಜಡನಾದ ಮನನೇ ॥ ೪ ॥ ಹರಿಯನರಿಯದೆ ಮನದಿ ಮರುಗಿ ಕರಗಲು ಬೇಡ; । ಮರೆಯಾಗುವವನಲ್ಲ ಸ್ಥಿರವಿರಲು ಮನದಿ ; ॥ ಎರವು ಮಾಡದೆ ಸ್ವಾಮಿ ಪರಿಪರಿಯ ಸೌಖ್ಯವನು । ಕರೆದು ಈವನು ನಮಗೆ ವರಹ ತಿಮ್ಮಪ್ಪ ॥ ೫ ॥—(ದಾ)

ಆ ದೇವರನ್ನೊಲಿಸಿಕೊಳ್ಳುವದಕ್ಕೆ ಪಡಬೇಕಾದ ಕಷ್ಟವನ್ನೆಲ್ಲ ನಾವು ಸಹಿಸಿರುವೆವಾದರೂ ಅವು ಫಲಕಾರಿಯಾಗದಿರುವ ಕಾರಣವೇನೆಂದರೆ—

ವೃ॥ ರಮಣೀಗೇಹಾದಿಯುಂ ಮಾಣ್ಬುದು ಸುವಿರತಿಯಿಂದಲ್ತು; ಸೈಸಿ ದುರ್ದಾದಂ | ಕ್ಷಮೆಯಿಂದಲ್ತುಷ್ಣಶೀತಾದಿಯು ಸಹಿಸಿದುದಾಡಂ ತಪಸ್ಸಿಂದ ಮಲ್ಲಂ; ॥ ಶ್ರಮವೆತ್ತೆಲ್ಲಾಗಳುಂ ಧ್ಯಾಸಿಸಿದುದು ಧನವೊಂದಲ್ಲದೀಶಾಂಘ್ರಿಯಲ್ತು | ಸ್ವಮಗಾ ಮೌನೀಂದ್ರಕೃತ್ಯಾಚರಣೆಯ ಫಲಮಂ ವಾಂಛಿಸಲ್ಕೆಂತು ಬರ್ಕುಂ? ॥ —(ಭ. ವೈ)

ಹೀಗೆ ಎಚ್ಚತ್ತುಕೊಂಡ ಒಬ್ಬ ಭಕ್ತನು ದೇವರಿಗೆ ಮೊರೆಯಿಟ್ಟಿರುವದೆಂತೆಂದರೆ —

ವೃ॥ ನಾನಾಗರ್ಭದೆ ಪುಟ್ಟಿ ಪುಟ್ಟಿ ಪೊರಮಟ್ಟಾ ರೂಪುಚೋಹಂಗಳಂ | ನಾನಾಭಾವದೆ ತೊಟ್ಟು ತೊಟ್ಟು ನಡೆದೆಂ; ನೈಮುಚ್ಚಿಗೂಟಂಗಳಂ ॥ ನಾನಾ ಭೇದದೊಳುಂಡುಮುಂಡು ತಣಿದೆಂ - ಛೀ! ಸಾಲದೇಂ? ಕಂಡುಮಂ | ತ್ಕೇನಯ್ಯಾ, ತಳುವಾಳ್ವರೇ? ಕರುಣಿಸಾ! ರತ್ನಾಕರಾಧೀಶ್ವರಾ ॥ —(ರ. ಶ)

ಟಿ॥ ಚೋಹ—ವೇಷ. ತಳುವಾಳ್ವರೇ—ತಡವನ್ನು ಮಾಡಬಹುದೇ?

ಹೀಗೆ ಪ್ರಾರ್ಥಿಸಿ ದೇವರ ನೆರವನ್ನು ಪಡೆದು ತಾಯ ಇಷ್ಟಾರ್ಥವನ್ನು ನಡೆಸಿಯೇ ತೀರುತ್ತೇನೆಂಬ ಅಭಿಮಾನವನ್ನು ತಳೆಯಬೇಕೆಂದು ಹೇಳಿ ಅಭಿಮಾನದ ವಿಷಯವಾಗಿ ಹೇಳಿರುವದೇನೆಂದರೆ—

ಭಾ॥ ಕಾಲದೊಳಗೆ ವಸಂತ, ವಿದ್ಯಾ | ಜಾಲದೊಳಗೆ ಕಪಿತ್ವ, ಗಜವೈ | ಹಾಳಿಯಲಿ ದೇವೇಂದ್ರ, ವಿಪ್ರಶ್ರೇಣಿಯೊಳು ವಾಣಿ, ॥ ಭಾಳನೇತ್ರನು ದೈವದಲಿ, ಬಿ | ಲ್ಲಾಳಿನಲಿ ಮನ್ಮಥನು, ಧನದಲಿ | ಹೇಳಲೇನಭಿಮಾನವೇ ಧನವೆಂದನಾ ವಿದುರ ॥ —(ಕ. ಭಾರ)

ಇದನ್ನರಿತೇ ಭಾಗವತೋತ್ತಮರು ಕೀರ್ತನಾರಂಭದಲ್ಲಿ "[illegible] ತಪ್ಪದೆ | ಮನುಜ | ಮಾತೃಭಕ್ತಿಯು" ಎಂದು ಮೊದಲಾಗಿ ಉಪದೇಶಮಾಡಿರುವರು. ಇದಕ್ಕೆ ನಿದರ್ಶನವಾಗಿ ಗರುಡನ ಮಾತೃಭಕ್ತಿಯ ಆಖ್ಯಾನವು ನಿರೂಪಣಮಾಡಲಾಗುವದು.

— — —

## ಆಖ್ಯಾನ

ಕೀ॥ ಮುನಿಕಶ್ಯಪನಿಗೆ ಕದ್ರುವಿನತೆಯರು | ಬಿನಿಯುರಿಬ್ಬರಿರಲಾಗವರೊಳ್ ॥ ವನಿತೆ ಕದ್ರು ಸಾವಿರ ಮೊಟ್ಟೆಗಳನು | ವಿನತೆಯೆರಡ ಪಡೆದರು ತಮ್ಮೊಳ್ ॥

ಹೀಗೆ ಸಂತತಿಯ ಸಂಖ್ಯೆಯಲ್ಲಿ ಹೆಚ್ಚುಕಡಿಮೆಯಾದದ್ದಲ್ಲದೆ ಮತ್ತೇನಾಯಿತೆಂದರೆ —

ಸಾ॥ ಐನೂರಬ್ದಕೆ ಕದ್ರುವಿನಣುಗರು | ಮಾಣದೆ ಫಣಿಕುಲವಾಗೆ ॥ ಮಾನಿನಿ ವಿನತೆಗೆ ತನಗಿಲ್ಲವೆನುತೆ | ಮಾನಸಕಾದುದು ಬೇಗೆ ॥

ಆಗ ವಿನತೆಯಿಂದ ನಡೆದ ಅಚಾತುರ್ಯವೇನೆಂದರೆ—

ದಿಂ|| ಒಡೆಯಲೊಂದಂ ತಾನಾಗಿ ಹೊಯ್ಯಲಾಗ | ತೊಡೆಗಳಿಲ್ಲದವಂ ಹುಟ್ಟಿ ಬಂದು ಬೇಗ || ಕೆಡುಕಿ, ನೀನೀಗಳ್ದಾಸಿಯಾಗೆನುತ್ತೆ | ಜಡಿಗು ಪೇಳ್ದಂ ಶಾಪವನು ಕೋಪಿಸುತ್ತೆ ||

ಆಗ ವಿನತೆಯು ಬೆಚ್ಚಿ ಬಿದ್ದು ತನ್ನ ಅವಿನಯಕ್ಕೆ ಕಣ್ಣೀರಿಡಲು ಆ ಮಗನು ಹೇಳಿದ್ದು—

ಭಾ|| ಅಳಲಬೇಡಲೆ ತಾಯೆ, ಹೂಸ್ವವು | ಬಳಸಿದುದು ವಿಧಿವಶದಲೆನಗಿಂ | ದಲಘುಭುಜಬಲನೆನ್ನನುಜನೈನೂರುವತ್ಸರಕೆ || ಉಳಿದುದೊಂದಂಡದಲಿ ಜನಿಸುವ; | ಹಲವು ಪರಿಗಳಲಿವನ ಕಾದಿರು; | ಬಳಿಕಲಾ ಮಗ ನಿನ್ನ ದಾಸ್ಯವನೊಲಿದು ಬಿಡಿಸುವನು || —(ಕ. ಭಾರ)

ಟಿ|| ಹೂಸ್ವ—ಪುಣ್ಯ.

ಹೀಗೆ ಹೇಳಿ ಅವನು ಅರುಣನೆಂಬ ಹೆಸರಿನಿಂದ ಸೂರ್ಯನ ಸಾರಥಿಯಾಗಿ ಹೋಗಲು ಇತ್ತ ಐನೂರು ವರ್ಷಗಳ ಮೇಲೆ ಮತ್ತೊಂದು ಮೊಟ್ಟೆಯು ಮರಿಯಾಗಿದೆ—

ಚೂ|| ಬಲುಬಿಳುಪಿನಿಂದಿರುವ ಕೊರಳು, ತಾಯ-ನಲವನಿಮ್ಮಡಿಮಾಡುತಿರಲು, ಕಣ್ಣು-ಹೊಳಪನೋಡುತ ನಾಚಲರಳು, ನೋಡೆ-ನೆಲವೆಲ್ಲವಾವರಿಸೆ ನೆರಳು, ಅಪರ—ಥಳಥಳಕೆ ತಲೆದೂಗೆ ಹರಳು | ಬಿಗಿಯಾಗಿ ತೋರೆ ನ್ಯೆಕಟ್ಟು, ಕಯ್ಯು-ಬಿಗಿಪಿನೊಳಗಿರೆ ಹಿಡಿದ ಪಟ್ಟು, ಭಯವ-ಬಗೆಯದಿಹ ಧೈರ್ಯವನು ತೊಟ್ಟು, ತಾಯ-ನಗುಮುಖಕೆ ಬಣ್ಣವನು ಕೊಟ್ಟು, ಅವಳ-ಹಗರಣವು ಬಯಲಾಗೆ ಕೆಟ್ಟು, ಜಗಕೆ-ಸೊಗವೀವುದನು ಮನದೊಳಿಟ್ಟು, ತನ್ನ-ಸೊಗಸನೇ ಬಯಸುವದ ಬಿಟ್ಟು | ಮೃದುವಾದ ತಲೆಯನುಳ್ಳವನು, ಹಗೆಯ-ಬೆದರಿಸುವ ಮುಖಕಾಂತಿಯವನು, ಎರಡು-ಬದಿಯೊಳಗೆ ರೆಕ್ಕೆಯುಳ್ಳವನು, ತಾಯ-ಹೃದಯಕ್ಕೆ ತಂಪನೆರೆವವನು, ಗಟ್ಟಿ-ಯೆದೆಯನ್ನು ಜನಕೆ ತೋರ್ಪವನು ||

ಇವನು ಗರುಡನೆನಿಸಿ ತಾಯಪ್ಪಣೆಯನ್ನು ಪಡೆದು ಸ್ವೇಚ್ಛಾನುಸಾರವಾಗಿ ಲೋಕಗಳನ್ನೆಲ್ಲ ಸಂಚರಿಸಿಕೊಂಡಿದ್ದನು. ಇತ್ತ ಕದ್ರುವಿನತೆಯರು ಒಂದು ದಿನ ಉಪವನದಲ್ಲಿ ಹೂಗೊಯ್ಯುತ್ತ ದೂರದಲ್ಲಿ ಒಂದು ಕುದುರೆಯನ್ನು ಕಂಡಾಗ—

ಸಾಂ|| ಎಲೆ ನೋಡೆ ಕದ್ರುವಾ ಕುದುರೆಯ ಮೈಯೆಲ್ಲ | ಬಿಳುಪೆಂದು ವಿನತೆ ಹೇಳಿದಳು; || ಫಲವೇನು ಬಾಲವು ಕಪ್ಪೆಂದು ಕದ್ರು ತಾ | ಹಳಿದು ವಿನೋದವಾಡಿದಳು ||

ಹೀಗೆಯೇ ಒಬ್ಬಳು ಕಪ್ಪೆಂದೂ ಒಬ್ಬಳು ಬಿಳುಪೆಂದೂ ಮಾತಿಗೆ ಮಾತು ನಡೆದು ಕೊನೆಗಾದ ದ್ದೇನೆಂದರೆ—

ಭಾ|| ನೀನು ಗೆಲಿದಡೆ ನಿನಗೆ ದಾಸ್ಯವ | ನಾನು ಮಾಡುವೆ; ನಾನು ಗೆಲಿದಡೆ | ನೀನೆನಗೆ ದಾಸ್ಯವನು ಮಾಡೆಂದೆನುತಲೊಡ್ಡವನು || ತಾನೆ ನಿಶ್ಚಯಿಸಿದಳು ತತ್ಕ | ದ್ರೂನಿತಂಬಿನಿ; ಶಾಪವೋಹಿತ | ಮಾನಿನಿಯ ನೊಡಬಡಿಸಿದಳು ನರನಾಥ ಕೇಳೆಂದ || —(ಕ. ಭಾರ)

ಅಷ್ಟು ಹೊತ್ತಿಗೆ ಪತಿಸೇವೆಯ ಸಮಯವಾದದ್ದರಿಂದ ಅದನ್ನು ಮುಗಿಸಿಕೊಂಡು ಬಂದು ಪರೀಕ್ಷಿಸಬೇಕೆಂದು ಇಬ್ಬರೂ ಮನೆಗೆ ಹೋಗಿರುವಾಗ ಕದ್ರು ತಾನು ಗೆಲ್ಲುವ ಕುಹಕವನ್ನು ಹೂಡಿ ತನ್ನ ಮಕ್ಕಳಾದ ಕರಿಹಾವುಗಳನ್ನು ಕರೆದು ಹೇಳಿದ್ದು—

ಸಾ|| ಕುದುರೆಯ ಬಾಲವು ಕಪ್ಪೆಂದಾಡಿದೆ | ಸದು ನಿಜವಾಗಲುಬೇಕು ;|| ಅದರಿಂ ನೀವಾ ಬಾಲವನೆಲ್ಲವ | ನೊದಗುತ ಮುಸುಕಿರಬೇಕು ||

ಅದಕ್ಕೆ ವಾಸುಕಿ ಮೊದಲಾದವರು ಹೇಳಿದ್ದು—

ಚಾ|| ಜನನಿ ಕೇಳಿದು ಧರ್ಮವೇ ಪುಸಿ-ಯನು ನುಡಿಯುತಲಿ ಗೆಲುವುದು ? | ಜನನಿಯಲ್ಲವೆ ಎಮಗೆ ವಿನತೆಯು-ಮನಕದೆಂತೊಳಿತೆನಿಪುದು ? || ನಿನಗೆ ಸರಿಯೇ ಇಂಥ ಪಾಪಕೆ-ತನುಜರನು ನಿಯಮಿಸುವದು ? | ವಿನಯವತಿಯಾಗಮ್ಮ, ಇದನೀ-ನೆನೆಯದಿರು ಸುಖವಪ್ಪುದು ||

ಏಕೆಂದರೆ—

ಶ್ಲೋ|| ಅಸತ್ಯಮಪ್ರತ್ಯಯಮೂಲಕಾರಣಮ್, | ಕುವಾಸನಾಸದ್ಮ, ಸಮೃದ್ಧಿವಾರಣಮ್, || ವಿಪನ್ನಿದಾನಂ, ಪರವಂಚನೋರ್ಜಿತಮ್, | ಕೃತಾಪರಾಧಂ ಕೃತಿಭಿರ್ವಿವರ್ಜಿತಮ್ || —(ಸು)

ಅ|| ಸುಳ್ಳೆಂಬುದು ಅಪನಂಬಿಕೆಯ ಬೇರು, ಕೆಟ್ಟ ವಾಸನೆಗಳ ತೌರುಮನೆ, ಇದ್ದ ಐಶ್ವರ್ಯವನ್ನು ಹಾಳುಮಾಡುವದು, ಆಪತ್ತುಗಳ ಗೂಡು, ಮತ್ತೊಬ್ಬರಿಗೆ ಮೋಸಮಾಡಿ ತಲೆ ಎತ್ತುವಂಥದ್ದು, ಪಾಪವನ್ನು ಮಾಡುವಂಥದ್ದು, ಪುಣ್ಯಶಾಲಿಗಳು ಹತ್ತಿರ ಸೇರಿಸದಂಥದ್ದು.

ಈ ಅಭಿಪ್ರಾಯಕ್ಕೆ ಕದ್ರು ಒಪ್ಪದೆ ಹೋದ್ದರಿಂದ ಕೆಲವು ಹಾವುಗಳು ತಾಯನ್ನು ತೊರೆದು ಹೊರಟವು ಆಗ ಅವುಗಳನ್ನು ತಾಯಿ ಶಪಿಸಿದ್ದು—

ಕೀ|| ತಾಯ ಮಾತನೇ ಗೌರವಿಸುತ್ತ ನ | ಹಾಯಕರಾಗದವರು ಹೋಗಿ; || ಸಾಯಿರಿ ಮುಂದಕೆ ಬಹ ಜನಮೇಜಯ | ರಾಯನ ಯಜ್ಞದಿ ಬಲಿಯಾಗಿ ||

ಆಗ ಉಳಿದ ಹಾವುಗಳು ಯೋಚನೆ ಮಾಡಿದ್ದು—

ತ್ರಿ|| ಉತ್ತರೆಯು ಬರೆತರೆ, ಹೆತ್ತಮ್ಮ ತೊರೆದರೆ, | ಸತ್ಯರು ತಪ್ಪಿ ನಡೆದರೆ ಲೋಕವಿ | ನ್ನೆತ್ತ ಸೇರುವದು ? ಸರ್ವಜ್ಞ || —(ಸ. ವ)

ಹೀಗೆಂದು ಅವು ಹೋಗಿ ತಾಯಿಗಾಗಿ ಆ ಕುದುರೆಯ ಬಾಲಕ್ಕೆ ಕೂದಲೆಳೆಗಳಂತೆ ಮುತ್ತಿದವು. ಆಮೇಲೆ ಕುದುರೆಯ ಪರೀಕ್ಷೆಗೆ ಬಂದಾಗ ವಿನತೆ ಸೋತು ಕದ್ರುವಿನ ದಾಸಿಯಾಗಿ ಅತ್ತದ್ದು—

ಮುಖಾರಿ—ಆದಿತಾಳ

ದಾಸಿಯಾಗಿಹೆನೆಂತೊ | ವಾಸವವಿನುತ || ಪ || ದಾಸಿಯಾದೀ ಬಾಳು | ಲೇಸೆನಿಸುವದೆಂತೊ || ಈ ಸಮಯದಿ ಪರ | ದೇಶಿಯಾದೆನೆ ಹಾಹಾ! || ಅ ಪ || ನನಗೆ ಸಮಾನಳಾದೀ | ವನಿತೆಯ ಬಳಿಯೊಳು | ಅನಿಮಿತ್ತದಿಂದಲಿ | ವಿನಯವ

ತೋರುತ ॥ ತನುವನು ದಂಡಿಸುತ। ಮನವನು ಖಂಡಿಸುತ। ಅನುದಿನವೀ ರೀತಿಯು। ತನುವ ಹೊತ್ತಿಹೆನೆಂತೋ? ॥ ೧ ॥ ಹಿರಿಯ ಮಗನ ನಾನು। ತರಹರಿಸುತ್ತಲಿ। ಭರದಿ ಹಡೆದ ಪಾಪ। ಏಕದೆ ಬಾಧಿಪುದಯ್ಯೊ? ॥ ಬರಿದೆ ದುಃಖಿಸುತಿಹೆ। ಸರಿಯದೆ ಗೈದುದುದಕೆ; । ಧರೆಯೊಳಗೀ ದುಃಖಕೆ। ಪರಿಹಾರವಿಲ್ಲವೇ? ॥ ೨ ॥ ಹೆಂಗುಸುತನಕಿರ್ಪ । ಕೊಂಗತನದಿ ನಾನು। ಮಂಗನಂದದಿ ಗೈದು। ಭಂಗಕೆ ಗುರಿಯಾದೆ; ॥ ರಂಗನೆ, ಸ್ಥಾವರ। ಜಂಗಮಸ್ವಾಮಿ, ನಿನ್ನ। ಬಂಗಾರದಡಿಗಳ। ಹಂಗಿಗಳಯ್ಯ ಪೊರೆ ॥ ೩ ॥

ಆ ದಾಸ್ಯದಲ್ಲಿ ವಿನತೆಗಾಗಿದ್ದ ಸ್ಥಿತಿಯನ್ನು ಲಕ್ಷ್ಯದಲ್ಲಿಟ್ಟುಕೊಂಡು ನೀತಿಶಾಸ್ತ್ರಕಾರರು ಹೇಳಿರುವದೇನೆಂದರೆ.—

ಶ್ಲೋ॥ ಭೂಶಯ್ಯಾ, ಬ್ರಹ್ಮಚರ್ಯಂ ಚ, ಕೃಶತ್ವಂ, ಲಘುಭೋಜನಮ್ ।
ಸೇವಕಸ್ಯ ಯತೇರ್ಯದ್ವದ್ವಿಶೇಷಂ ಪಾಪಧರ್ಮಜಃ ॥ —(ಸು)

ಅ॥ ನೆಲದ ಮೇಲೆ ಮಲಗುವದು, ಬ್ರಹ್ಮಚರ್ಯ, ಸೊರಗುವದು, ಸ್ವಲ್ಪ ಊಟ—ಇವು ಸಂನ್ಯಾಸಿಯಂತಾದರೂ ಸೇವಕನಿಗೆ ಪಾಪದ ಫಲವಾಗಿ ಶಿಕ್ಷಾರೂಪವಾಗಿರುವುವು.

ವಿನತೆಯ ಈ ದೀನವೆಸೆಯನ್ನು ನೋಡಿ ಕನಿಕರಗೊಂಡು ನಾರದರು ಅಷ್ಟು ಹೊತ್ತಿಗೆ ಪ್ರಾಯಸ್ಥನಾಗಿ ತಿರುಗಿಕೊಂಡಿದ್ದ ಗರುಡನ ಬಳಿಗೆ ಬಂದು ಅವನ ಮುಂದೆ ವಿನತೆಯ ಸ್ಥಿತಿಯನ್ನು ತಿಳಿಸಿ ಹೇಳಿದ್ದು—

ಕಂ॥ ಮನುಜನೆನಿಪಾತ ತಾಯಿಯ। ನೆಣಿಕೆಗೆ ಕೈಗೊಳದೆ ಬಾಳ್ವನಾ ದೊಡೆ ಧರೆಯೊಳ್ ॥ ದನುಜರೆನಿಪಾತತಾಯಿಯ। ರೆಣಿಕೆಗೆ ಪಕ್ಕಾಗಿ ಬಾಳ್ವನಪ್ಪಂ ದರಿಯೊಳ್ ॥ —(ಸು)

ಟಿ॥ (ದನುಜರೆನಿಪ) ಆತತಾಯಿಯರ— ವಿಷವನ್ನುಣಿಸುವದು, ಬೆಂಕಿಯನ್ನು ಹಚ್ಚುವದು, ಮೊದಲಾದ ಕಾರಣಗಳಿಂದ ಕೊಲ್ಲಲೆಣಿಸುವವರು. ಪಕ್ಕಾಗಿ—ಅವರ ಜೊತೆಯಲ್ಲಿ ಲೆಕ್ಕಕ್ಕೆ ಬರುವನಾಗಿ. ದರಿ—ಬೆಟ್ಟದ ಗವಿ.

ಆಗ ಗರುಡನು ತಾಯ ಸೆರೆಯನ್ನು ಬಿಡಿಸಬೇಕೆಂದು ಮನಸ್ಸುಮಾಡಿ ತಾಯ ಬಳಿಗೆ ಬಂದು ಸಂತಯಿಸಿ ಹೇಳಿದ್ದು—

ಕಂ॥ ಪಡೆದರ್ತಾಯುಂ ತಂದೆಯುಮೊಡಲಂ। ಪ್ರಾಣಮುಮನವರವು; ಕೇಳಿದುದಂ ॥ ಕುಡುವುದರಿನಾಯ್ತೆ? ನೀ ಮನ। ದೆಡೆ ಮಡಗದೆ ಬೆಸನ ತೋಳ್ತುವೆಸನಂ ಬೆಸಸಿಂ ॥ —(ಪಂ. ಭಾ)

ಟಿ॥ ಎಡೆಮಡಗದೆ—ಸಂಕೋಚಪಡದೆ.

ತಲೆಯನ್ನು ಬಗ್ಗಿಸಿಕೊಂಡಿದ್ದ ವಿನತೆಯ ಬಾಯಲ್ಲಿ ಮಾತೇ ಹೊರಡಲಿಲ್ಲ. ಆಗ ಗರುಡನು ಕದ್ರುವಿನ ಬಳಿಗೆ ಬಂದು ಹೇಳಿದ್ದು—

ಭಾ॥ ನಿನಗೆ ಮಗ ನಾನಲ್ಲವೇ? ಎನ್ನನು ನಿರೀಕ್ಷಿಸಿ ದಯದೊಳೆನ್ನಯ। ಜನನಿಯನು ಬಿಡು; ದೈವವಶದಲಿ ದಾಸ್ಯ ಘಟಿಸಿದುದು; ॥ ವನತೆಗದ ನೀ ಪರಿ

ಹರಿಸು; ಗುಣ । ಪನು ಮೆರೆದು ಕೃಪೆಯಾಗು ನೀನೆಂ । ದೆನುತ ಕದ್ರುವ ಬೇಡಿಕೊಂಡನು ಗರುಡ ವಿನಯದಲಿ ॥

**ಕೆಟ್ಟ ಸ್ವಭಾವದ ಮುಂದೆ ವಿನಯದ್ದೇನು ನಡೆಯುತ್ತದೆ!**

ಚೌ॥ ಲಲಿತ ಶಶಿರುಚಿ ತಾಗೆ ಚಂದ್ರೋ-ಪಲವು ಕರಗುವದಲ್ಲದೆ । ಸಲೆ ಕಠಿನವಾಗಿರ್ಪ ನೀರಸ-ಶಿಲೆ ಕರಗಿ ತಾ ಹರಿವುದೇ ? ॥ ಖಳರೊಡನೆ ವಿಸಯಗಳ ನಾಡಲು—ಫಲಪ ಕಾಣಲು ಬರ್ಪುದೇ ? । ಸುಲಭಸೆನೆ ಅದರೊಳಗೆ ಪೆಣ್ಗಳ-ಛಲವ ಬಿಡಿಸಲ್ಕಪ್ಪುದೇ ? ॥

**ಕದ್ರು ಹೇಳಿದ್ದು—**

ದಿಂ॥ ಬರಿಯ ಮಾತಿಂದಂ ಬಿಡುವಳಲ್ಲ ನಾನು ; । ಅರಿಯೆ ಬಲ್ಲದನಾಗಿ ರ್ಪೆಯಲ್ತೆ! ನೀನು; ॥ ಇರಿಸು ನೀಂ ತಂದಾ ಸುಧೆಯನೆನ್ನ ಮುಂದೆ; । ಸೆರೆಯ ನೀಗಿಸುವೆಂ ನಿನ್ನ ತಾಯನಿಂದೇ ॥

**ಒಡನೆ ಗರುಡನು ತನ್ನಲ್ಲಿ ತಾನು ಪ್ರತಿಜ್ಞೆಮಾಡಿದ್ದು—**

**ಕೇತಾರಗೌಳ—ರೂಪಕ**

ತಾಯ ಸೆರೆಯ ಬಿಡಿಸೆನಿನ್ನು । ಭೂರಿಶೌರ್ಯದಿ । ನಾ ॥ ಪ ॥ ಆಯಾಸವ ಮನಕೆ ತಾರದೆ । ಕಾಯಪ-ನಾಯುವ-ನೋಡದೆ ಈಗಲೆ ॥ ಅ. ಪ ॥ ಎಷ್ಟು ಅಡ್ಡಿಗಳಟ್ಟಿ ಬಂದರೂ । ನಿಷ್ಠೆಯಲ್ಲಿಯೇ ಕಟ್ಟುಬೀಳುತ ॥ ಅಷ್ಟಸಿದ್ಧಿ—ಮುಟ್ಟಿತ್ತ್ಯ-ಪಟ್ಟನ್ನೆ ಸಾಧಿಪೆ ॥ ೧ ॥ ಬರಲಿ ಪ್ರಾಣನನುರುಹುವಂಥ । ಭರದಪಾಯವು; ತಿರುಗಲೊಲ್ಲೆನು; ॥ ಸೆರೆ ಬಿಡದೆ-ವಿರಚಿಸುವೆ-ಸುರೆ ನುಡಿದಂದದಿ ॥ ೨ ॥ ಎದುರು ಬಂದವರೆದೆಯ ಸೀಳುತ । ಸದೆದು ತೋರುವೆ ಚದುರಿನಿಂದಲಿ; ॥ ಇದಕಾಗಿ-ಎದೆಗೊಡುವೆ;-ಮುಂದನಸು ಪಡುವೆ ॥ ೩ ॥

**ಆಗ ತಂದೆಯನುಗ್ರಹವನ್ನು ಪಡೆಯಬೇಕೆಂದು ತಂದೆಗೆರಗಿದಾಗ ತಂದೆ ಹೇಳಿದ್ದು—**

ಸಾ॥ ತರಳನೆ, ಅಮೃತವನಗ್ನಿದೇವ ಕಾ । ದಿರುವನದಂ ನೀನೆಂತು ॥ ತರುವೆ ? ತೊರೆಯೊನೀನೀ । ಉದ್ಯೋಗವನರಿತು ವಿವೇಕವ ನಿಂತು ॥

**ಅದಕ್ಕೆ ಗರುಡನು ಹೇಳಿದ್ದು—**

ಸಾಂ॥ ಇರೆ ನಿಮ್ಮನುಗ್ರಹ ತರುವೆ ನಾನಗ್ನಿಯ । ನುರುಹುತೆ ಜವದೊಳು ಸುಧೆಯ; ॥ ಸೊರಗಿಹೆ ಹಸಿವೆಯಿಂದಾಹಾರವನು ನೀನು । ಕರುಣಿಪುದೆನಗೀಗ ಸದಯ ॥

**ಅದಕ್ಕೆ ತಂದೆಯ ಉತ್ತರ—**

ಕಂ॥ ಇರುವದೈ ಕಬಳಾಖ್ಯ । ಗಿರಿಸಾನುವಿನೊಳಾನೆ ; । ಸರಸಿಯೊಂದಳಗಿರ್ದಪುದು ಮೊಸಳೆ; ॥ ನೆರೆಕಾದುತಿರ್ಪುವವ । ನುರೆ ತಿನ್ನು ಬೇರೊಂದರಿಯೆ ನಿನ್ನಯ ಹಸಿವನಡಗಿಸಲ್ಕೆ ॥

ಆಗ ಗರುಡನು ಬೆರಗಾಗಿ ಅವುಗಳ ಕಾದಾಟದ ಕಾರಣವನ್ನು ಕೇಳಿದಾಗ ತಂದೆ ಹೇಳಿದ್ದು—

ಭಾ|| ಅವರು ಮಧುಕೈಟಭರು ; ಪೂರ್ವದ | ಲವರು ವಿಪ್ರನ ಬಸಿರಲುದಿಸಿಯೆ | ವಿವಿಧಧನವನು ತಮ್ಮಗಾ ಅಗ್ರಜನು ಕೊಡದಿರಲು || ತವೆ ಕಮಠನಾಗೆಂದು ನಿಗೆ ಶಾ | ಪವನು ಕೊಟ್ಟನು ತಮ್ಮನಣ್ಣನು | ವಿವರಿಸಿದ ನೀ ದಂತಿಯಾಗೆಂದಾತನನು ಶಪಿಸಿ || —(ಕ. ಭಾರ)

ಇದನ್ನೆಲ್ಲ ತಿಳಿದುಕೊಂಡು ಅಮೃತವನ್ನು ತರುವದಕ್ಕೆ ಹೊರಟ ಗರುಡನನ್ನು ತಂದೆ ಆಶೀರ್ವದಿಸಿದ್ದು—

ಚೌ|| ಸುಧೆಯ ತಹ ನಿನ್ನಯ ಶಿರಸ್ಸನು–ಮಧುಹರನು ಕಾಪಾಡಲಿ; | ವಿಧಿಯು ತಂದೆಯು ನಿನ್ನ ರೆಕ್ಕೆಯ–ಸದಯನಾಗುತೆ ಪೊರೆಯಲಿ ; || ಅಧಿಕರಿಸಿ ನಿಗೆ ಹಿಂದುಮುಂದನು–ಪದುಮನಾಭನು ಕಾಯಲಿ; | ಕುಧರಧರನೇ ಸರ್ವದೇಹವ–ನೊದಗಿ ರಕ್ಷಣೆಗೆಯ್ಯಲಿ || —(ಕ. ಭಾರ)

ಅಲ್ಲಿಂದ ಹೊರಟ ಗರುಡನು ಕಬಳಪರ್ವತದ ಬಳಿಗೆ ಬಂದು—

ಭಾ|| ಬಳಿಕಲಾ ವಿನತಾಕುಮಾರನು | ಬಲದ ಪದದಲಿ ಕಚ್ಛಪನನ | ಗ್ಗಳನೆನಿಪ ದಂತಿಯನು ತನ್ನಯ ವಾಮಪದದಿಂದ || ಚಲಿಸದಂದದಿ ಪಿಡಿದು ನಖಚಯ | ಗಳಲಿ ಸಿಕ್ಕಿಸಿ ಹೆಣಗಿದರೆ ನಿ | ಟ್ಟೆಲುಗಳನು ನುಗ್ಗೊತ್ತಿ ನಿಶ್ಚೇಷ್ಟಿತರ ಮಾಡಿದನು || —(ಕ. ಭಾರ)

ಹೀಗೆ ಬರುತ್ತಿರುವಾಗ ದಾರಿಯಲ್ಲಿ—

ಭೋ|| ಮರಕೆ ಕಾಲು ಸೋಕೆ ಕೊಂಬೆ | ಮುರಿಯಲಲ್ಲಿ ತಪವಗೆಯ್ಯು | ತಿರುವ ವಾಲಖಿಲ್ಯರನ್ನು ಕಾಣುತಾ ಕ್ಷಣ || ಮುರಿದ ಕೊಂಬೆ ಬೀಳದಂತೆ | ಭರದಿ ಹಿಡಿಯೆ ಋಷಿಗಳಾಗ | ಹರಸೆ ಕಂಟಕಿಗಳ ಮೇಲೆ ಜವದೊಳೆಸೆದನು.

ಆಮೇಲೆ ಬೆಟ್ಟದಮೇಲಿಟ್ಟುಕೊಂಡು ಅವೆರಡನ್ನೂ ತಿಂದು ಅಮೃತವಿರುವ ಬಳಿಗೆ ಹೋಗಿ ಅಗ್ನಿಯನ್ನು ಕಂಡು ಅವನನ್ನು ಗೆಲ್ಲುವದಕ್ಕಾಗಿ ಬ್ರಹ್ಮನನ್ನು ಪ್ರಾರ್ಥಿಸಿದ್ದು—

ಅಠಾಣ—ಝಂಪೆ

ಹೇಳೆನಗೆ ಕಾರ್ಯಸಾಧನೆಗೊಂದು ಮಾತ || ಪ || ಕೇಳಿಕೊಳ್ಳುವೆನೊ ಬಹು ದೈನ್ಯದಿ ವಿಧಾತ || ಅ. ಪ || ಹೆತ್ತ ತಾಯಿಯು ದಾಸಿಯಾಗಿರಲ್ಕದನು ನೋ | ಡುತ್ತುದಾಸೀನದಿಂದಿರುವೆನೆಂತೋ ! || ಮುತ್ತಯನೆ ಮುಮ್ಮಗನ | ಮೇಲೆ ದಯವಿಟ್ಟು ಪೇ | ಳುತ್ತಮದುಪಾಯವನು ತಾಯ ಹಿತಕೆ || ೧ || ತಾಯ ಋಣವನು ತೀರಿಸದೆ ಸುಮ್ಮನಿರೆ ನಾನು | ನಾಯ ಬಾಳಿನವನಾಗುವದಿಲ್ಲವೇ? || ಆಯಾಸವಾದರೂ ಸಹಿಸಿ ತಾಯಿಯ ನಾನು | ಕಾಯಲೇ ಬೇಕಯ್ಯ ಕಮಲಾಸನ || ೨ || ತನ್ನ ಯತ್ನದಿ ಕೀರ್ತಿಯನ್ನು ಗಳಿಸದೆ ಬಾಳ್ವ ! ಕುನ್ನಿಗಳ ಸಾಲಿನೊಳು ಸೇರಲಾರೆ; || ಅನ್ಯಾಯದಾಸ್ಯದಿಂ ತಾಯ ಬಿಡಿಸಿದನೆಂಬ | ಮನ್ನಣೆಗೆ ಪಾತ್ರನನು ಮಾಡೆನ್ನನು || ೩ ||

ಬ್ರಹ್ಮನು ಪ್ರತ್ಯಕ್ಷನಾಗಿ ಕೇಳಿದ್ದು—

ಶ॥ ಸುರಿದರೆ ಸವಸೀತದ ರಾಶಿಯನಾ। ಉರಿ ತಾ ಕೆಳಗಿಳಿಯುವದು; ॥ ಅರಿತದ ಯುಕ್ತಿನಸೆ ದೊರೆವುದು ಸುಧೆಯಿಂದ। ಹೊರತದು ತಾ ದೊರೆಯುವದರಿದು ॥

ಟಿ॥ ಅರಿದು—ಅಸಾಧ್ಯ.

ಒಡನೆ ಅವನು ಗೋಲ್ಲರಪಟ್ಟಿಗಳನ್ನೆಲ್ಲ ಸುತ್ತಿ ಪ್ರಯತ್ನಿಸಿದ್ದು—

ಭಾ॥ ಸಗಗಳಂದದಿನೆಸೆವ ಸವನೀ । ತಗಳ ರಾಶಿಯನೆತ್ತಿ ತಂದಾ । ಖಗವರೇಣ್ಯನು ತಚ್ಚಿಖಿಜ್ವಾಲೆಯಲಿ ತಂದೊಟ್ಟಿ ॥ ಬಗೆದು ಹೊಕ್ಕಗ್ನಿಯನು ಒಹುಪಾ । ರಗಳನೆಲ್ಲವ ಪೂಸಿ ದೈತ್ಯಾ । ಳಿಗಳ ಮರ್ದಿಸಿ ಲೋಹಮಯಚಕ್ರಗಳ ಸೆರೆ ಹರಿದ ॥ —(ಕ. ಭಾರ)

ಈ ರೀತಿಯಲ್ಲಿ ಸಾಹಸವನ್ನು ಮಾಡಿ ಅಮೃತವನ್ನು ತೆಗೆದುಕೊಂಡು ಬರುತ್ತ ಮಾಡಿದ ಹರಿಸ್ಮರಣೆ—

ಆದಿತಾಳ

ರಾಧಾಕೃಷ್ಣ ಜಯ ಕುಂಜವಿಹಾರಿ । ಮುರಲೀಧರ ಗೋವರ್ಧನಧಾರಿ ।
ಶಂಖಚಕ್ರಪೀತಾಂಬರಧಾರಿ । ಕರುಣಾಕರ ಶ್ರೀಕೃಷ್ಣ ಮುರಾರಿ ॥

ದಾರಿಯಲ್ಲಿ ಬಂದ ವಿಘ್ನವೇನೆಂದರೆ—

ಕು॥ ಸುಧೆಯನಾ ಗರುಡನೊ । ಯ್ವುದ ಕೇಳಿ ದೇವೇಂದ್ರ । ಸದು ಬುತದ ಕೋಪದಿಂದಟ್ಟಿ ಬಂದು ॥ ಎದೆಗೆಡಿಸುವಾರ್ಭಟದಿ । ಬೆದರಿಸುತಲಾ ಗರುಡ । ನೆದೆಗಿಟ್ಟನಾಗ ವಜ್ರಾಯುಧದೊಳು ॥

ಆದರೆ ಗರುಡನಲ್ಲಿ ನಾಮಸ್ಮರಣೆಯಿದ್ದದರಿಂದ ಅದು ನಾಟದೆ ಹೋದದ್ದು—

ಸಾಂ॥ ನಾಮಕೀರ್ತನೆಯಲ್ಲಿ ಸುಖವಲ್ಲಿ; ಸಂತತ । ಪ್ರೇಮಾನಂದಗಳೆಂಬುವಲ್ಲಿ; ॥ ನಾಮವಿಲ್ಲದಿರಲು ಶ್ರಮಖೇದವೇ ಗತಿ । ನಾಮವೆ ಶೋಕಾಪಹಾರಿ ॥ —(ಮ. ಉ.)

ಆಗ ಇಂದ್ರನು ತನ್ನ ಕೈಸಾಗದೆ ಹಿಮ್ಮೆಟ್ಟಲು ಗರುಡನು ಮುಂದೆ ಸಾಗಿಬಂದು—

ಕೀ॥ ಹರಡಿ ದರ್ಭೆಗಳ ಕದ್ರುವಿಸಿದಿರೊಳ । ಗಿರಿಸಿದನಮೃತವ ತಾನಲ್ಲಿ ॥ ಭರದಿ ಕದ್ರುವದ ನೋಡುತೆ ವಿನತೆಯ । ಸೆರೆಯ ಕಳಚಿದಳು ಕ್ಷಣದಲ್ಲಿ ॥

ಕದ್ರು ತನ್ನ ಮಕ್ಕಳಿಗೆಲ್ಲ ಅಮೃತವನ್ನು ಕುಡಿಸಿ ಅವರ ಮರಣದ ಭಯವನ್ನು ತಪ್ಪಿಸಬೇಕೆಂದು ಮಡಿಯಾಗಿ ಬರಹೇಳಿ ಕಳುಹಿಸಿರಲಾಗ—

ಸಾ॥ ಸುರಪನೈದಿ ಸುಧೆಯನು ಕದ್ದೊಯ್ಯಲು । ಭರದಿ ಬಂದ ಹಾವುಗಳು ॥ ಬರಿಯ ದರ್ಭೆಯನು ನೆಕ್ಕಲು ನಾಲಿಗೆ। ಗೆರಡಾಯಿತು ಸೀಳುಗಳು ॥

ಅದನ್ನು ನೋಡಿ ಕದ್ರು ದುಃಖಿಸಿದ್ದು—

ಕಮಾಚು—ಅಟತಾಳ

ಈರೀತಿಯುಣಲಿಕ್ಕಿತೇ? | ಮಾಡಿದ ಪಾಪ || ಪ || ದೂರದೃಷ್ಟಿಯೊಳು ವಿ| ಚಾರ ಮಾಡದುದಕ್ಕೆ || ಅ. ಪ || ಮೋಸದಿ ಸವತಿಯು | ದಾಸಿಯು ಗೈದುದು || ಈ ಸಮಯದೊಳಿಂತು | ಗಾಸಿಯು ಮಾಡಿತೆ? || ೧ || ಸವತಿಯು ಮಾನಸ | ಕವನಾಸಗೈದುದು || ಬುವಿಯೊಳಗೆನಗೇ | ಅವಸತಿಗಾದುದೇ ? || ೨ || ಪುತ್ರ ಮಕ್ಕಳ ಬಿಹ್ವೆ | ಕತ್ತರಿಸಿಹುದಲ್ಲ! || ಮತ್ತೀತಕೆನ್ನ ಬಾ | ಳ್ವೆತ್ತ ಹೋಗಲು ಸಾಸು? || ೩ ||

ವಿನತೆಯು ಅಂದು ತಾನು ಪುತ್ರವತಿಯಾದೆನೆಂದು ಮಗನ ಮುಂದೆ ಹೇಳಿದ್ದು—

ಶ್ಲೋ|| ಪ್ರಜ್ಞಯಾ ವಾ ಪರಾಕ್ರಮ್ಯಾ ಯೋ ಬಲೇನ ಧನೇನ ವಾ | ಧುರಂ ವಹತಿ ಗೋತ್ರಸ್ಯ ಜನನೀ ತೇನ ಪುತ್ರಿಣೀ || —(ಸು)

ಅ|| ಹರಡುವಂಥ ಬುದ್ಧಿಯಿಂದಲೋ ಶಕ್ತಿಯಿಂದಲೋ ಹಣದಿಂದಲೋ ಯಾವನು ವಂಶದ ಭಾರವನ್ನು ಹೊರುತ್ತಾನೋ ಅವನಿಂದ ಅವನ ತಾಯಿ ಗಂಡು ಹಡೆದವಳಾಗುತ್ತಾಳೆ.

ಹೀಗೆಂದು ಸತ್ಪುತ್ರನನ್ನು ಹೊಗಳಿದ್ದು—

ಶ್ಲೋ|| ಪಾತ್ರಂ ನ ತಾಪಯತಿ; ನೈವ ಮಲಂ ಪ್ರಸೂತೇ; | ಸ್ನೇಹಂ ನ ಸಂಹರತಿ; ನೈವ ಗುಣಾನ್ ಕ್ಷಿಣೋತಿ; || ದ್ರವ್ಯಾವಸಾನಸಮಯೇ ಚಲತಾಂ ನ ಧತ್ತೇ; | ಸತ್ಪುತ್ರ ಏವ ಕುಲಸದ್ಮನಿ ಕೋಽಪಿ ದೀಪಃ || —(ಸು)

ಅ|| ಒಳ್ಳೆಯ ಮಗನು ಮನೆತನಕ್ಕೊಂದು ಹೊಸ ಬಗೆಯ ದೀಪ. ಹೇಗೆಂದರೆ—ದೀಪವು ಪಾತ್ರೆಯನ್ನು ಸುಡುವಂತೆ ಯೋಗ್ಯರನ್ನು ತಾಪಗೊಳಿಸುವದಿಲ್ಲ; ದೀಪವು ಕರಕನ್ನು ಹುಟ್ಟಿಸುವಂತೆ ಪಾಪವನ್ನುಂಟುಮಾಡುವದಿಲ್ಲ; ದೀಪವು ಎಣ್ಣೆಯನ್ನು ಬತ್ತಿಸುವಂತೆ ಸ್ನೇಹವನ್ನು ಕಡಿಮೆಮಾಡುವದಿಲ್ಲ; ದೀಪವು ಬತ್ತಿಯನ್ನು ಕಡಿಮೆ ಮಾಡುವಂತೆ ಗುಣಗಳನ್ನು ಕೊರತೆಗೊಳಿಸುವುದಿಲ್ಲ; ಎಲ್ಲವೂ ಹೋದ ಮೇಲೆ ದೀಪವು ಚಂಚಲವಾಗುವಂತೆ ಚಂಚಲನಾಗುವದಿಲ್ಲ.

ಈ ಪ್ರಕಾರ ತಾಯಿಯಿಂದ ಶ್ಲಾಘನೆಯನ್ನು ಪಡೆದ ಗರುಡನು ತನ್ನ ತಾಯಿಗೆ ಹಾವುಗಳು ಮಾಡಿದ ವಂಚನೆಯನ್ನು ತಿಳಿದು ಅವುಗಳನ್ನು ಲಕ್ಷ್ಯದಲ್ಲಿಟ್ಟುಕೊಂಡು ಹೇಳಿದ್ದು—

ಶ್ಲೋ|| ಮೌಳೌ ಸನ್ಮಣಯೋ, ಗೃಹಂ ಗಿರಿಗುಹಾ, ತ್ಯಾಗಃ ಕಿಲಾತ್ಮತ್ವಚೋ, | ನಿರ್ಯತ್ನೋಪನತೈಶ್ಚ ವೃತ್ತಿರನಿಲೈರೇಕತ್ರ ಚರ್ಯೇದೃಶೀ; || ಅನ್ಯತ್ರಾನೃಜುವರ್ತ್ಮಗತಾ, ದ್ವಿರಸನಾ, ವಕ್ತ್ರೇ ವಿಷಂ, ವೀಕ್ಷಣಂ | ಸರ್ವಾಮಂಗಲಸೂಚಕಂ ಕಥಯ ಭೋ, ಭೋಗಿನ್ಸಖೇ ಕಿಸ್ವಿದಮ್ ||

ಅ|| ಗೆಳೆಯರಾದ ಹಾವುಗಳಿರಾ, ನಿಮ್ಮ ಒಂದು ಕಡೆ ನೋಡಿದರೆ ತಲೆಯಲ್ಲಿ ರತ್ನಗಳು, ಪರ್ವತಗುಹೆಯಲ್ಲಿ ವಾಸ, ನಿಮ್ಮ ಮೈಚರ್ಮವನ್ನೆ ತ್ಯಾಗಮಾಡುವಿರಿ, ತಾನಾಗಿ ಬಂದ ಗಾಳಿಯೇ ನಿಮ್ಮೂಟ; ಇನ್ನೊಂದು ಕಡೆ ನೋಡಿದರೆ ಅಡ್ಡದಾರಿಯಲ್ಲಿ ಓಡುವಿಕೆ, ಎರಡು ನಾಲಿಗೆ, ಬಾಯಲ್ಲಿ ವಿಷ, ಬಹಳ ಅಮಂಗಲವಾದ ನೋಟ. ಏನಿದು!

ಹೀಗೆಂದು ತನ್ನ ತಾಯಿಗೆರಡು ಬಗೆದವರನ್ನು ನಿರ್ಮೂಲಮಾಡಿಬಿಡಬೇಕೆಂದು—

ಶ್ಲೋ|| ಅಹಿರಹಿರಿತಿ ಸಂಭ್ರಮಪದ | ಮಿತರಜನಃ ಕಿಮಪಿ ಕಾತರೋ ಭವತು; || ವಿಹಗಪತೇರಾಹಾರೇ | ಸ ತು ಸರಲಮೃಣಾಲದಲರುಚಿರಃ ||—(ಸು)

ಅ|| ಹಾವುಹಾವೆಂದು ಇತರರು ಎಷ್ಟೇ ಬೆದರುವವರಾದರೂ ಗರುಡನ ಆಹಾರಕ್ಕೆ ಅದು ಉದ್ದವಾದ ಕಮಲದ ದಂಟಿನ ಹಾಗೆ ಮನೋಹರವಾಗಿರುವದು.

ಹೀಗೆ ಗರುಡನು ಮಾತೃಸೇವೆಯನ್ನು ಮಾಡಿ ಕೃತಾರ್ಥನಾಗಿ ಹೋಗುತ್ತಿರುವಾಗ ವಿಷ್ಣು ಅದನ್ನು ಕಂಡು "ವೈನತೇಯಶ್ಚ ಪಕ್ಷಿಣಾಂ" ಎಂಬ ಗೀತಾವಚನದಂತೆ ಅವನನ್ನು ತನ್ನ ಅಂಶವೆಂದು ಭಾವಿಸಿದ್ದರಿಂದ ಮುಂದೆ ನಡೆದದ್ದೇನೆಂದರೆ—

ಭಾ|| ತಿರುಗಿ ಹೋಗುತ್ತಿರಲು ಗರುಡಗೆ | ಹರಿ ಬಳಿಕ ಪ್ರತ್ಯಕ್ಷವಾದನು; | ಸಿರಿದೆಸಿಪ ವಾಹನವು ನೀನೆನಗಾಗಬೇಕೆಂದು, || ಪರರಥದ ಸಾನೇರೆ ನೀನೇ | ಸುರುಚಿರಧ್ವಜವಾಗಿ ನಿಲ್ಲೆಂ | ದುರುತರಪ್ರೇಮದಲಿ ವರಗಳನಿತ್ತು ಕಳುಹಿದನು||

—(ಕ. ಭಾರ)

ಇದನ್ನು ಲಕ್ಷ್ಯದಲ್ಲಿಟ್ಟುಕೊಂಡೇ ಕೀರ್ತನಾರಂಭದಲ್ಲಿ ಭಾಗವತೋತ್ತಮರು "ಮಾನವು ತಪ್ಪದೆ | ಮನುಜ | ಮಾತೃಭಕ್ತಿಯು" ಎಂದು ಮೊದಲಾಗಿ ಉಪದೇಶ ಮಾಡಿರುವರು.

---

# ಅನಸೂಯಾಖ್ಯಾನ

## ಪೀಠಿಕೆ—ಪಾತಿವ್ರತ್ಯ

### ರೇಗುಪ್ತಿ—ಆಟತಾಳ

ಸ್ತುತ್ಯವಿದಿಳೆಯೊಳಗೆ | ಪಾತಿ | ವ್ರತ್ಯವು ಸ್ತ್ರೀಯರಿಗೆ || ಪ || ನಿತ್ಯವಿದನು ನಡೆಸುವ ಪೆಣ್ಮಣಿಯರ | ಗತ್ಯಧಿಕದ ಯೋಗ್ಯತೆ ಕೈಸೇರ್ವುದು || ಅ. ಪ || ಅವ ರಾಜ್ಞಾಪಿಸಲು | ರವಿಶಶಿ | ಯವರ ದಾಸರಹರು; || ಅವರಿಗಮರರೆಲ್ಲರು ಶರ ಣೆಂಬರು; | ಅವರೊಳಗುದಿಸುವರಾ ತ್ರಿಮೂರ್ತಿಗಳು || ೧ ||

ಹಿಂದೆ ಎಷ್ಟೋ ಜನ್ಮಗಳನ್ನು ನೆನಪಿಗೆ ತಂದುಕೊಂಡು ಈ ಜನ್ಮದಲ್ಲಿ ಶಾಸ್ತ್ರಜ್ಞಾನವನ್ನು ಪಡೆದಿರುವ ಒಬ್ಬನು ಪಶ್ಚಾತ್ತಾಪಪಟ್ಟಿರುವದೇನೆಂದರೆ—

ವೃ|| ಅಯ್ಯೋ! ಕುತ್ಸಿತಯೋನಿಯೊಳ್ಜನಿಸುಳ್ವುದೆತ್ತಾನೆತ್ತ! ; ಛೀ! ನಾರುವೀ | ಮೈಯೆತ್ತೆನ್ನಯ ನಿರ್ಮಲಪ್ರಕೃತಿಯೆತ್ತೀ ದೇಹಜವ್ಯಾಧಿಯಿಂ || ಪುಯ್ಯಲ್ವೆತ್ತಿಹುದೆತ್ತಲೆನ್ನ ನಿಜವೆತ್ತೊಯ್ದೆನ್ನ ನಿಮ್ಮತ್ತ ದ | ಮ್ಮಯ್ಯಾ! ರಕ್ಷಿಸು! ರಕ್ಷಿಸಾ! ತಳುವಿದೇಂ ರತ್ನಾಕರಾಧೀಶ್ವರಾ || —(ರ. ಶ)

ಟಿ|| ನಿರ್ಮಲಪ್ರಕೃತಿ– ಪಾರರಹಿತವಾದ ಜ್ಞಾನಸ್ವರೂಪವು. ಪುಯ್ಯಲ್ವಿತ್ತಿಹುದು–ಗೋಳಿಡುತ್ತಿರುವುದು. ಎನ್ನ ನಿಜ–ದುಃಖರಹಿತವಾದ ನನ್ನ ಜ್ಞಾನಸ್ವರೂಪವು. ತಳುವಿದೇಂ - ತಡಮಾಡಿದೆನು.

ಈ ಜನ್ಮಕ್ಕೆ ಬಂದಮೇಲೆ ದೇವರಿಗೆ ಶರಣುಹೋಗುವುದರ ಹೊರತು ಬೇರೆ ಉಪಾಯವಿಲ್ಲ. ಏಕೆಂದರೆ—

ಶ್ಲೋ|| ರೋಗಾ ಹರಂತಿ ಸತತಂ ಪ್ರಬಲಾಃ ಶರೀರಮ್ ; | ಕಾಮಾದಯೋಽಪ್ಯನುದಿನಂ ಪ್ರದಹಂತಿ ಚಿತ್ತಮ್ ; || ಮೃತ್ಯುಶ್ಚ ನೃತ್ಯತಿ ಸದಾ ಕಲಯನ್ ದಿನಾನಿ ; | ತಸ್ಮಾತ್ತ್ವಮದ್ಯ ಶರಣಂ ಮಮ ದೀನಬಂಧೋ ||

—(ಹ. ಶ)

ಟಿ|| ಪ್ರಬಲವಾದ ರೋಗಗಳು ಯಾವಾಗಲೂ ಶರೀರವನ್ನು ಅಪಹಾರಮಾಡುತ್ತವೆ ಪ್ರತಿದಿನವೂ ಕಾಮ ಮೊದಲಾದುವುಗಳು ಮನಸ್ಸನ್ನು ಪರಿತಾಪಗೊಳಿಸುತ್ತವೆ. ಮರಣದೇವತೆಯು ಯಾವಾಗಲೂ ದಿನಗಳನ್ನು ಎಣಿಸುತ್ತ ಕುಣಿಯುತ್ತಿದೆ. ಹೇ ದೇವ, ಆದ್ದರಿಂದ ನೀನೇ ನನಗೆ ಶರಣು.

ಹೀಗೆ ನಮಗೆ ಪ್ರತಿದಿನವೂ ಅನುಭವಕ್ಕೆ ಬರುತ್ತಿದ್ದರೂ ಇನ್ನೂ ನಮ್ಮಲ್ಲಿ ಪ್ರಾಪಂಚಿಕವಾದ ಆಸೆಯೇ ಕುಣಿದಾಡುತ್ತಿರುವುದನ್ನು ನೋಡಿ ಒಬ್ಬನು ಬೇಸತ್ತು ಹೇಳಿದ್ದೇನೆಂದರೆ—

ಕಂ|| ನರೆ ಶಿರಮಂ ತೆರೆ ಮೊಗಮಂ | ನೆರೆ ಮುಸುಕಿ ಶರೀರಮೆಲ್ಲ ಬಡವೆನಿಸಿದೊಡಂ || ಅರರೆ! ದುರಾಶೆಯದೊಂದೇ | ತರುಣನ ತೆರದಿಂದೆ ಕುಣಿವುದೇಗೆಯ್ದಪೆನಾಂ? ||

—(ಭ. ವೈ)

ಈ ಬಗೆಯ ಆಸೆಯುಳ್ಳವರಿಗೆ ಮೋಕ್ಷದ ಆಸೆಯಿಲ್ಲವೆಂದು ಜ್ಞಾನಿಗಳು ಹೇಳಿರುವದೇನೆಂದರೆ—

ಮಾಳವಗೌಳ–ಝಂಪೆ

ಆಗದಾಗದು ಲೋಕದವರಿಗೆ ನಿಜಮುಕ್ತಿ | ಭೋಗೇಚ್ಛೆಯೊಳಗುಳ್ಳ ಬರಿಯ ವೈರಾಗ್ಯದಿಂ || ಪ || ಪ್ರಸವದುಃಖದಿ ಕ್ರೀಡೆಯನು ಬಯ್ದು ಬಳಿಕದ | ನೆಸಗಲಾತುರಿಪ ಕಾಮಿನಿಯಂದದಿ || ವ್ಯಸನಕಾಲದಿ ಸಂಸೃತಿಗೆ ರೋಸಿ ಸುಖವು ಸಂ | ಧಿಸಲು ಮೈಮರೆವ ಪ್ರಸೂತಿವೈರಾಗ್ಯದಿಂ || ೧ || ಸಳಕೃಷ್ಣಾದ್ಯರ ಹಾನಿ ಕಥೆ ಕೇಳ್ವ ಸಮಯದೊ | ಳಿಳೆಯ ಭೋಗವನೆಲ್ಲ ಪುಸಿಗಾಣುತೆ || ಬಳಿಕೀಚೆಗೈತಂದು ಸತಿಪುತ್ರಧನಧಾನ್ಯ | ಗಳಿಗೆಳಸುತಿಹ ಪುರಾಣವೈರಾಗ್ಯದಿಂ || ೨ || ಶವವ ಸಂಸ್ಕರಿಸುವಲ್ಲಳುವರ ಕಂಡು ದೇ | ಹವ ನೆಚ್ಚೆವಿನ್ನೆಂದು ದೃಢವ ಮಾಡಿ|| ಭವನಕೈದಿದ ಕೂಡೆ ಗುರುಸಿದ್ಧ ಬಳಲ್ದೀ ಕಾ | ಯವನುಪಚರಿಪ ಶ್ಮ | ಶಾನ ವೈರಾಗ್ಯದಿಂ || ೩ ||

—(ಕೈ. ಕ)

ಹೀಗೆಯೇ ನಡೆದರೆ ಗತಿಯೇನೆಂದು ಒಬ್ಬ ಭಕ್ತನು ದಿಕ್ಕುಗೆಟ್ಟು ಹೇಳಿರುವದೇನಂದರೆ—

ವೃ|| ಎಷ್ಟುತಾಯಿಗಳಾದರೋ! ಬೇರೆ ಬೇರೆ ಮ–ತ್ತೆಷ್ಟು ತಂದೆಗಳಾದರೋ! | ಎಷ್ಟು ಮಕ್ಕಳುಗಳಾದರೊ! ಲೆಕ್ಕವನು ನೋಡ-ಲೆಷ್ಟು ಸಂಖ್ಯೆಯ

ಹೆಂಡಿರೋ! ॥ ಎಷ್ಟು ಜನ್ಮಗಳಾದವೋ ಹಿಂದೆ ಮುಂದೆ ಮು-ತ್ತೆಷ್ಟು ಜನ್ಮಗಳು ಬಹವೋ! । ಕಷ್ಟಪಡಸರಿಯೆ ಸಾಸೀಸ ಹೇಳಲಿ ಮೂಢ-ಸೃಷ್ಟೀಶ, ಏಕಾಂಬರ ॥ —(ಹ. ಹಂ)

ಇಂಥ ಹಗ್ಗಾದ ಮನಸ್ಸಿನವರನ್ನು ಕುರಿತು ದೊಡ್ಡವರು ದಾರಿಯನ್ನು ತೋರಿಸಿರುವದೇನಂದರೆ—

ಶ್ಲೋ॥ ಅಜರಾಮರವತ್ಪ್ರಾಜ್ಞೋ ವಿದ್ಯಾಮರ್ಥಂ ಚ ಸಾಧಯೇತ್ ; ॥ ಗೃಹೀತ ಇವ ಕೇಶೇಷು ಮೃತ್ಯುನಾ ಧರ್ಮಮಾಚರೇತ್ ॥ —(ಸು)

ಅ॥ ಮುಪ್ಪೂ ಮರಣವೂ ಇಲ್ಲದವನಂತೆ ವಿದ್ಯೆಯನ್ನೂ ಹಣವನ್ನೂ ಗಳಿಸಬೇಕು; ಮೃತ್ಯು ಜುಟ್ಟನ್ನು ಹಿಡಿದಿರುವದೆಂದು ತಿಳಿದು ಧರ್ಮವನ್ನು ಮಾಡಬೇಕು.

ಇದೇ ಅರ್ಥವನ್ನೇ ಒಬ್ಬ ಕವಿಯು ಹೇಳಿರುವದೇನೆಂದರೆ—

ಕಂ॥ ಪಡೆವೆಂ ಮೋಕ್ಷಮನೆಂಬೊಡೆ । ಕಡೆಗಣಿಸದೆ ಮಾಡು ಧರ್ಮಮಂ ದೂರ್ತಿಂದಂ ; ॥ ಬಡಿದುಂ ಬಯ್ದುಂ ಕಳ್ದುಂ । ಪಡೆವಂತಿರೆ ಮುಕ್ತಿ ಮರುಳೆ, ಬಡವನ ಧನಮೇ ? ॥ —(ಧ ಅ)

ಮೋಕ್ಷವೆಂಬುದು ಸುಮ್ಮನೆ ಬರತಕ್ಕದ್ದಲ್ಲವೆಂದು ಅದರ ಸಾಧನಗಳನ್ನು ಸೂಚಿಸಿ ಭಕ್ತರು ಹಾಡಿರುವದೇನೆಂದರೆ —

ಧನ್ಯಾಸಿ — ಛಾಪು

ಸುಮ್ಮನೆ ಬಾರದೆ ಮುಕುತಿ । ಮನುಜ । ಸುಮ್ಮನೆ ಬಾರದೆ ಮುಕುತಿ ॥ ಪ ॥ ಮನದಲ್ಲಿ ದೃಢ ಇರಬೇಕು । ಪಾಪಿ । ಜನರ ಸಂಸರ್ಗ ನೀಗಲುಬೇಕು ॥ ಅನುಮಾನವನು ಬಿಡಬೇಕು । ತನ್ನ । ತನುಮನಧನ ಒಪ್ಪಿಸಿಕೊಡಬೇಕು ॥ ೧ ॥ ಪರಿಪೂರ್ಣಯೆಂದೆನಬೇಕು । ಹರಿ । ಗುರುಗಳ ಪರದೈವವೆಂದೆನಬೇಕು ॥ ವಿರಹದಾಸೆಯ ಬಿಡಬೇಕು । ನಮ್ಮ । ಪರದೈವಕೃಷ್ಣನ ನೆರೆ ನಂಬಬೇಕು ॥ ೨ ॥ ಕಾಮಕ್ರೋಧವ ಬಿಡಬೇಕು । ಹರಿ । ನಾಮಸಂಕೀರ್ತನೆಯನು ಮಾಡಬೇಕು ॥ ಹೇಮದಾಸೆಯ ಬಿಡಬೇಕು । ದೇಹ । ಮಮತೆ ಅಸ್ಥಿರವೆಂದು ತಿಳಿದಿರಬೇಕು ॥ ೩ ॥ ಸಂದಣಿಗಳ ಬಿಡಬೇಕು । ಪಾಪ । ಬೃಂದದ ಸಂದೇಹಗಳ ಬಿಡಬೇಕು ॥ ನಿಂದಿಸಿದರೆ ಹಿಗ್ಗಬೇಕು । ಕೋಪ । ಬಂದರೆ ಸೈರಣೆಯನು ಮಾಡಬೇಕು ॥ ೪ ॥ ದುರ್ವ್ಯಾಪಾರಗಳ ಬಿಡಬೇಕು । ನಮ್ಮ । ಪುರಂದರವಿಠಲನ ನೆರೆ ನಂಬಬೇಕು ॥ ಧರ್ಮಕ್ಕೆ ನೆರವಾಗಬೇಕು । ಬ್ರಹ್ಮ । ಜ್ಞಾನದೀಪದಲ್ಲಿ ಸುಳಿಯಾಡಬೇಕು ॥ ೫ ॥ —(ದಾ)

ಗೃಹಸ್ಥರಿಗೆ ಹೀಗೆ ನಡೆಯುವದಕ್ಕೇನಿರಬೇಕೆಂದರೆ—

ಶ್ಲೋ॥ ನ ಗೃಹಂ ಗೃಹಮಿತ್ಯಾಹುರ್ಗೃಹಿಣೀ ಗೃಹಮುಚ್ಯತೇ ; । ಗೃಹಂ ತು ಗೃಹಿಣೀಹೀನಂ ಕಾಂತಾರಾದತಿರಿಚ್ಯತೇ ॥ —(ಸು)

ಅ॥ ಮನೆಯು ಮನೆಯಲ್ಲ; ಹೆಂಡತಿಯೇ ಮನೆ. ಹೆಂಡತಿಯಿಲ್ಲದ ಮನೆ ಕಾಡಿಗಿಂತ ಕಡೆ.

ಶ್ಲೋ॥ ಪದನ್ಯಾಸೋ ಗೇಹಾದ್ಬಹಿರಹಿಫಣಾರೋಪಣಸಮೋ ; | ನಿಜಾವಾಸಾದನ್ಯದ್ಭವನಮುಪರದ್ವೀಪತುಲಿತಮ್ ; || ವಚೋ ಲೋಕಾಲಭ್ಯಂ ಕೃಪಣಧನತುಲ್ಯಂ ಮೃಗದೃಶಃ ; | ಪುಮಾನನ್ಯಃ ಕಾಂತಾದ್ವಿಧುರಿವ ಚತುರ್ಥೀ ಸಮುದಿತಃ || —(ಸು)

ಅ|| ಮನೆಯ ಹೊರಕ್ಕೆ ಕಾಲಿಡುವದೆಂಬುದು ಹಾವಿನ ಹೆಡೆಯ ಮೇಲಿಟ್ಟಹಾಗೆ. ತನ್ನ ಮನೆಯನ್ನು ಬಿಟ್ಟು ಬೇರೆ ಮನೆಗೆ ಹೋಗುವದೆಂಬುವದು ಬೇರೆ ದ್ವೀಪಕ್ಕೆ ಹೋದಹಾಗೆ. ಮಾತೆಂಬುದು ಜಿಪುಣನ ಹಣದಂತೆ ಯಾರಿಗೂ ದೊರೆಯುವುದಿಲ್ಲ. ಗಂಡನ ಹೊರತು ಮತ್ತೊಬ್ಬ ಗಂಡಸಿನ ಮುಖವು ಚೌತಿಯ ಚಂದ್ರನಂತೆ.

ಆದ್ದರಿಂದ ಕೀರ್ತನಾರಂಭದಲ್ಲಿ ಭಗವದ್ಭಕ್ತರು "ಸ್ತ್ರೀತ್ವವಿದಿಳೆಯೊಳಗೆ | ಪಾತಿ | ವ್ರತ್ಯವು ಸ್ತ್ರೀಯರಿಗೆ" ಎಂದು ಮೊದಲಾಗಿ ಉಪದೇಶಮಾಡಿರುವರು. ಇದಕ್ಕೆ ಉದಾಹರಣೆಯಾಗಿ ಅನಸೂಯಾಖ್ಯಾನವು ನಿರೂಪಣಮಾಡಲಾಗುವುದು.

## ಆಖ್ಯಾನ

(ಮಾರ್ಕಾಂಡೇಯ ಪುರಾಣದಲ್ಲಿರುವಂತೆ)

ಕೀ|| ಕೌಶಿಕನೆಂಬುಳೆಯಮುರಸುರೋಗದಿ | ಗಾಸಿಗೊಂಡು ಮನೆಯಲ್ಲಿ ರಲು || ಲೇಸೆನೆ ಹೆಂಡತಿ ಸೇವಿಸುತಿದ್ದಳು | ದೇಶವೆಲ್ಲ ಸರಿಯೆಂದೆನಲು ||

ಗೃಹಸ್ಥಾಶ್ರಮವನ್ನು ನೀತಿಶಾಸ್ತ್ರಕಾರರು ಪ್ರಶಂಸೆಮಾಡಿರುವದೇನೆಂದರೆ—

ಶ್ಲೋ|| ಮಾನುಷ್ಯಂ, ವರವಂಶಜನ್ಮ, ವಿಭವೋ, ದೀರ್ಘಾಯುರಾರೋಗ್ಯತಾ, | ಸನ್ಮಿತ್ರಂ, ಸುಸುತಃ, ಸತೀ ಪ್ರಿಯತಮಾ, ಭಕ್ತಿಶ್ಚ ನಾರಾಯಣೇ, || ವಿದ್ವತ್ವಂ, ಸುಜನತ್ವಮಿಂದ್ರಿಯಜಯಃ, ಸತ್ಪಾತ್ರದಾನೇ ರತಿ | ಸ್ತೇ ಪುಣ್ಯೇನ ವಿನಾ ತ್ರಯೋದಶಗುಣಾಃ ಸಂಸಾರಿಣಾಂ ದುರ್ಲಭಾಃ || —(ಸು)

ಅ|| ಮನುಷ್ಯಜನ್ಮ, ಒಳ್ಳೆ ವಂಶದಲ್ಲಿ ಹುಟ್ಟುವಿಕೆ, ಐಶ್ವರ್ಯ, ದೀರ್ಘಾಯು, ಆರೋಗ್ಯ, ಒಳ್ಳೆ ಗೆಳೆಯ, ಒಳ್ಳೆ ಮಗ, ಪ್ರಿಯಳಾದ ಹೆಂಡತಿ, ದೇವರಲ್ಲಿ ಭಕ್ತಿ, ಪಾಂಡಿತ್ಯ, ಸುಜನತ್ವ, ಇಂದ್ರಿಯಜಯ, ಒಳ್ಳೆಯವರಿಗೆ ಕೊಡಬೇಕೆಂಬ ಪ್ರೀತಿ—ಈ ಹದಿಮೂರು ಗುಣಗಳು ಪುಣ್ಯವಿಲ್ಲದೆ ಸಂಸಾರಿಗಳಿಗೆ ಬರುವುದಿಲ್ಲ.

ಕೌಶಿಕನಿಗೆ ಆರೋಗ್ಯದ ಕೊರತೆಯೊಂದು ಹೆಚ್ಚಾಗಿದ್ದುದಲ್ಲದೆ ಅವನಲ್ಲಿ ದೈವೀಸಂಪತ್ತಿಗಿಂತ ಆಸುರೀಸಂಪತ್ತೂ ತುಂಬಿತ್ತು. ಆಸುರೀಸಂಪತ್ತು ಏನೆಂದರೆ—

ಶ್ಲೋ|| ದಂಭೋ, ದರ್ಪೋಽತಿಮಾನಶ್ಚ, ಕ್ರೋಧಃ, ಪಾರುಷ್ಯಮೇವ ಚ, | ಅಜ್ಞಾನಂ ಚಾಭಿಜಾತಸ್ಯ ಪಾರ್ಥ ಸಂಪದಮಾಸುರೀಮ್ || —(ಭ. ಗೀ)

ಅ|| ಒಳ್ಳೆ ಕುಲದಲ್ಲಿ ಹುಟ್ಟಿದ್ದರೂ ದಂಭ, ದರ್ಪ, ದುರಭಿಮಾನ, ಸಿಟ್ಟು, ನಿಷ್ಠುರ, ಅಜ್ಞಾನ-ಇವುಗಳಿರುವದು ಅಸುರರ ಲಕ್ಷಣ.

ಹೀಗಿದ್ದರೂ ಅವನ ಹೆಂಡತಿಯಿಂದ ಅವನ ಹುಳುಕುಗಳೆಲ್ಲ ಮುಚ್ಚಿಹೋಗಿದ್ದವು. ಸಂಸಾರದಲ್ಲಿ ಗಂಡನಿಗಿಂತ ಹೆಂಡತಿಯೇ ಮುಖ್ಯ. ಆದ್ದರಿಂದಲೇ—

ಶ್ಲೋ|| ಅಸಾರಭೂತೇ ಸಂಸಾರೇ ಸಾರಭೂತಾ ನಿತಂಬಿನೀ | ಇತಿ ಸಂಚಿಂತ್ಯ ವೈ ಶಂಭುರರ್ಧಾಂಗೇ ಪಾರ್ವತೀಂ ದಧೌ —(ಸು)

ಅ|| ಹುರುಳಿಲ್ಲದ ಸಂಸಾರದಲ್ಲಿ ಸ್ತ್ರೀಯೇ ಮುಖ್ಯವೆಂದು ಯೋಚಿಸಿ ಶಿವನು ಪಾರ್ವತಿಯನ್ನು ತನ್ನ ಅರೆಮೈಯ್ಯಲ್ಲಿಟ್ಟುಕೊಂಡನು.

ಕೌಶಿಕನ ಹೆಂಡತಿಯು ತನ್ನ ತಂದೆಯ ಉಪದೇಶವನ್ನು ಯಾವಾಗಲೂ ಮನಸ್ಸಿಗೆ ತಂದುಕೊಳ್ಳುತ್ತಿದ್ದದ್ದೇನೆಂದರೆ—

ಶ್ಲೋ|| ಶುಶ್ರೂಷಸ್ವ ಗುರೂನ್ಕುರು ಪ್ರಿಯಸಖೀವೃತ್ತಿಂ ಸಪತ್ನೀಜನೇ; || ಭರ್ತುರ್ವಿಪ್ರಕೃತಾಪಿ ರೋಷಣತಯಾ ಮಾಸ್ಮ ಪ್ರತೀಪಂ ಗಮಃ ; || ಭೂಯಿಷ್ಠಂ ಭವ ದಕ್ಷಿಣಾ ಪರಿಜನೇ ; ಭೋಗೇಷ್ವನುತ್ಸೇಕಿನೀ ; | ಯಾಂತ್ಯೇವಂ ಗೃಹಿಣೀಪದಂ ಯುವತಯೋ ; ವಾಮಾಃ ಕುಲಸ್ಯಾಧಯಃ || —(ಸು)

ಅ|| ಗುರುಗಳನ್ನು ಸೇವಿಸು. ಸವತಿಯರನ್ನು ಗೆಳತಿಯರಂತೆ ಕಾಣು. ಗಂಡನ ಕೋಪದಿಂದ ಮನಸ್ಸು ತಳಮಳಗೊಂಡರೂ ವಿರೋಧವನ್ನು ಮಾಡಬೇಡ. ಸುತ್ತಮುತ್ತಣವರಲ್ಲಿ ಬಹಳ ದಾಕ್ಷಿಣ್ಯ ಉಳ್ಳವಳಾಗು. ಪ್ರಾಪಂಚಿಕಸುಖದಲ್ಲಿ ಕುತೂಹಲವನ್ನು ಹೊಂದಬೇಡ. ಇಂಥ ಸ್ತ್ರೀಯರು ಗೃಹಿಣಿಯರೆನಿಸಿಕೊಳ್ಳುತ್ತಾರೆ. ಇದರಂತೆ ನಡೆಯದವರು ಕುಲಕ್ಕೆ ರೋಗಪ್ರಾಯರಾಗಿರುತ್ತಾರೆ.

ಇತ್ತ ಕ್ಷಯರೋಗಿಯಾಗಿದ್ದರೂ ಕೌಶಿಕನು ಒಂದು ದಿನ ದಾರಿಯಲ್ಲಿ ಹೋಗುತ್ತಿದ್ದ ಒಬ್ಬ ವೇಶ್ಯೆಯನ್ನು ನೋಡಿ ಮರುಳಾಗಿದ್ದಾನೆ—

ತೋಡಿ—ಛಾಪು

ಏನುರೂಪವೆ | ಮಾನಿನಿಯಳೆ || ಪ || ದೀನನಾದೆನ್ನ | ಪ್ರಾಣವ ಕಾಯೆ || ಅ. ಪ || ಹರನ ಕಣ್ಣಿನಿಂದ | ಉರಿದ ಮನ್ಮಥನ || ಬರಮಾಡುವವು | ತರುಣಿ, ನಿನ್ನ ಕಣ್ಣು || ೧ || ಸುರಪಲೋಕದಲ್ಲಿ | ಮೆರೆವ ಪೆಣ್ಗಳಿಲ್ಲ || ಅರಿಯೆ ನಿನ್ನ ಸಹ | ಚರಿಯರೆಂದು ತಿಳಿವೆ || ೨ || ಒಡವೆಯಿಲ್ಲದೆ ನೀ | ಬೆಡಗ ಬೀರುತಿಹೆ || ಒಡತಿಯಾಗೆನಗೆ | ಜಡಜಾನನೆಯೆ || ೩ ||

ಹೀಗೆಂದು ಒಡನೆ ಕಾಮವಿಕಾರವನ್ನು ಹೊಂದಿದ ಕೌಶಿಕನೇನು ಮಾಡಿದನೆಂದರೆ—

ಶ್ಲೋ|| ಪ್ರಾಹ ಭಾರ್ಯಾಂ ನಯಸ್ವೇತಿ ತ್ವಂ ಮಾಂ ತಸ್ಯಾ ನಿವೇಶನಮ್| ಯಾ ಸಾ ವೇಶ್ಯಾ ಮಯಾ ದೃಷ್ಟಾ ರಾಜಮಾರ್ಗೇ ಗೃಹೇ ಸತಾ || —(ಮಾ. ಪು)

ಅ|| ನಾನು ಮನೆಯಲ್ಲಿದ್ದು ರಾಜವೀಥಿಯಲ್ಲಿ ಹೋಗುತ್ತಿದ್ದ ಯಾವ ವೇಶ್ಯೆಯನ್ನು ನೋಡಿ

ದೆನೊ ಅವಳ ಮನೆಗೆ ನನ್ನನ್ನು ಕರೆದುಕೊಂಡು ಹೋಗೆಂದು ಹೆಂಡತಿಗೆ ಹೇಳಿದನು.

ಆಗ ಆವನ ಹೆಂಡತಿಯು ಅವನ ಮೋಹವನ್ನು ಕುರಿತು ತನ್ನಲ್ಲಿ ತಾನು ಯೋಚಿಸಿದ್ದು—

ಶ್ಲೋ|| ಹಾ! ಹಂತ !! ಸಂಹಾರಮುರೋಜಮಂಡಲಮ್ । ಸ್ತ್ರಿಯಾಃ ಕ್ರಮಂ ಲೋಚನಯೋಶ್ಚ ರೌರವಮ್ ॥ ಪಶ್ಯನ್ನತಾಸ್ಯಾಂ ರಮತೇ ತರಾಂ ಜನೋ । ಮನೋಭವೋ ಹಂತ! ದುರಂತವಿಕ್ರಮಃ ॥ —(ಸು. ಲಾ)

ಅ|| (೧) ಹಾ! ಹಾ! ಸ್ತ್ರೀಯು (ಸಂ+ಹಾರಂ+ಉರೋಜ+ಮಂಡಲಂ) ಸ್ತನದ ಮೇಲೆ ಉತ್ತಮವಾದ ಹಾರವುಳ್ಳವಳು ಮತ್ತು (ರೌರವಂ) ಜಿಂಕೆಯಂತೆ ಮನೋಹರವಾದ ಕಣ್ಣುಳ್ಳವಳು. (೨) ಹಾ! ಈ ಸ್ತ್ರೀಯು (ಸಂಹಾರಂ + ಉರೋಜಮಂಡಲಂ) ಗುಂಡಾದ ಸ್ತನಗಳೆಂಬ ಮೃತ್ಯುವನ್ನುಳ್ಳವಳು ಮತ್ತು (ರೌರವಂ) ನರಕದಂಥ ಕಣ್ಣುಳ್ಳವಳು. ಹೀಗೆ ಕಾಣುತ್ತಿದ್ದರೂ ಜನರು ಅವರನ್ನು ಮೋಹಿಸುತ್ತಾರಲ್ಲ! ಮನ್ಮಥನ ಪ್ರಭಾವವು ಹೆಚ್ಚಿನದು !!

ಅವಳು ಪತಿಯು ಮಾತಿಗೆ ಬದಲಾಡುವವಳಾಗಿರಲಿಲ್ಲವಾದ್ದರಿಂದ—

ಶ್ಲೋ|| ಸ್ಕಂಧೇ ಭರ್ತಾರಮಾರೋಪ್ಯ ಜಗಾಮ ಮೃದುಗಾಮಿನೀ ॥ —(ಮಾ. ಪು)

ಅ|| ಅವಳು ಗಂಡನನ್ನು ಹೆಗಲ ಮೇಲೆ ಕುಳ್ಳಿರಿಸಿಕೊಂಡು ಮಲ್ಲಗೆ ಹೊರಟಳು.

ದಾರಿಯಲ್ಲಿ ಹೋಗುತ್ತಿರುವಾಗ ಎದುರಿಗೆ—

ಸಾ|| ಕಂಡಿತಲ್ಲಿ ಶೂಲದ ಮರವೊಂದರೆ । ಮಾಂಡವ್ಯನನದರಲ್ಲಿ ॥ ಭಂಡರೇರಿಸಿರೆ ಸಿರಪರಾಧಿಯನು; । ಕೊಂಡೆಯಕಿದಿರುಂಟೆಲ್ಲಿ ? ॥

ಟಿ|| ಕೊಂಡೆಯ - ಚಾಡಿ.

ಆಗ—

ದಿಂ|| ದುರಳನಾದಾ ಕೌಶಿಕನದನ್ನು ನೋಡಿ । ಮರಕಮಂ ತಾಂ ತೋರಿಸದೆ ಕ್ರೌರ್ಯಗೂಡಿ ॥ ಭರದಿ ನೋವಂ ಗೆಯ್ಯಲ್ಕೆ ಮನವ ಮಾಡಿ । ಬರಿದೆ ಅಲ್ಲಾಡಿಸಿದನದನು ಖೋಡಿ ॥

ಇದರಿಂದ ವ್ಯಥೆಗೊಂಡ ಮಾಂಡವ್ಯನು ಶಪಿಸಿದ್ದು—

ಶ್ಲೋ|| ಯೇನಾಹಮೇವಮತ್ಯರ್ಥಂ ದುಃಖಿತಶ್ಚಾಲಿತೋ ವೃಥಾ । ಸೂರ್ಯೋದಯೇಽವಶಃ ಪ್ರಾಣೈಃ ವಿಯೋಕ್ಷ್ಯತಿ ನ ಸಂಶಯಃ ॥ —(ಮಾ. ಪು)

ಅ|| ನಾನು ಮೊದಲೇ ಹೆಚ್ಚಾಗಿ ದುಃಖಿಸುತ್ತಿರುವಾಗ ಯಾರು ನಿಷ್ಕಾರಣವಾಗಿ ಅಲ್ಲಾಡಿಸಿದರೊ ಅವರು ಬೆಳಗಾಗುವದರೊಳಗೆ ಸಾಯುತ್ತಾರೆ; ಸಂಶಯವಿಲ್ಲ.

ಈ ಶಾಪವು ಆ ಹೆಂಡತಿಯ ಕಿವಿಗೆ ಬಿತ್ತು. ಆಗ ತನ್ನ ಪತಿಯ ಜೀವಿತಕ್ಕಾಗಿ ಏನು ಮಾಡಬೇಕೆಂದು ಯೋಚಿಸಿ ಹರಿಯ ಬೆಂಬಲವನ್ನು ಬಯಸಿ ಹಂಬಲಿಸಿದ್ದು—

ಸೀ|| ಗರುಡನಂದದಿ ನಿನ್ನ ಹೊರುವದೆಂಬುದನರಿಯೆ; –ನೆರೆಹನುಮನಂತೆ ಸೇವಿಸುವದರಿಯೆ ; । ಸಿರಿಯಂತೆ ನಿನ್ನೊಳಕ್ಕರೆಯ ತೋರುವದರಿಯೆ ;–ಸುರವೈರಿಯಂದದಲಿ ಕೊಡುವದರಿಯೆ ; । ಕರಿಯಂತೆ ನಿನ್ನನಾದರದಿ ಕರೆವುದ

ನರಿಯೆ ;–ತರಳನಂದದಿ ದೈನ್ಯದೋರಲರಿಯೆ ;। ನರನಂತೆ ಗೆಳೆಯನಾಗಿರುವದೆಂ ಬುದನರಿಯೆ;-ತರುಣಿಯುರ ತೆರದಿ ಮೋಹಿಸುವದರಿಯೆ ; ॥ ಪರಿಪರಿಯ ವ್ರತಗಳನು ಮಾಡಲರಿಯೆ ; । ನಿರುತವುಂ ಧ್ಯಾನದೊಳಗಿರುವದರಿಯೆ ; । ಮರುಕ ಪುಟ್ಟುವ ತೆರದಿ ಸ್ತುತಿಸಲರಿಯೆ ; । ವರಕರ್ಮಗಳನೊಂದನರಿಯೆ ಹರಿಯೆ ॥ —(ಕ. ಸಂ)

ಕೊನೆಗೆ ಎರಡನೆ ಉಪಾಯವನ್ನರಿಯದೆ ಅಲ್ಲಿಯೇ ಕುಳಿತು—

ಶ್ಲೋ॥ ಪ್ರೋವಾಚ ವ್ಯಥಿತಾ ಸೂರ್ಯೋ ನೈವೋದಯಮುಪೇಷ್ಯತಿ ॥

ಅ॥ ವ್ಯಥೆಗೊಂಡ ಆ ಗೃಹಿಣಿಯು ಸೂರ್ಯನು ಹುಟ್ಟಲೇ ಬೇಡವೆಂದು ಹೇಳಿದಳು.

ಸೂರ್ಯನೇ ಹುಟ್ಟದೆ ಹೋದದ್ದರಿಂದ ಜಗತ್ತೆಲ್ಲ ವ್ಯಥೆಗೊಳಗಾದ್ದನ್ನು ನೋಡಿ ದೇವತೆಗಳೆಲ್ಲರೂ ಬಂದು ಬ್ರಹ್ಮನಿಗೆ ಮೊರೆ ಇಟ್ಟದ್ದು—

ಭೈರವಿ—ರೂಪಕ

ಪರಿಪಾಲಿಸು ಬ್ರಹ್ಮದೇವ, । ಶರಣಾಗತಲೋಕವನ್ನು ॥ ಪ ॥ ತರಣಿಯು ತಾನಡಗಿರುವನು। ಮರೆಯೊಳಗಜ್ಞಾತವಾಸದಿ ॥ ಅ. ಪ ॥ ಉದಿಸಲಿಲ್ಲ ಪೂರ್ವದಲಿ । ಉದಯಾಚಲದಲ್ಲಿ ಸೂರ್ಯ ; ॥ ಅದರಿಂದಲಿ ನಿಂತುಹೋದವು । ವಿಧಿಕಾಂಡದ ಸರ್ವಕಾರ್ಯ ॥ ೧ ॥ ಹರಿದಶ್ವನ ಕಿರಣವೀಗ। ಧರೆಗೆ ಬಾರದಿಹುದರಿಂದ ॥ ಸೊರಗಿರುವವು ಬೆಳೆಗಳೆಲ್ಲ। ನೆರೆ ಬಲಿಯಲು ಶಾಖವಿಲ್ಲದೆ ॥ ೨ ॥ ಆದಿತ್ಯನ ಕರುಣವಿಲ್ಲದೆ । ಮೇದಿನಿಯೊಳಗೆಲ್ಲ ಜನರು ॥ ಬಾಧೆಗೊಂಡು ಸಾಯುತಿಹರು ; । ನೀ ದಯಾಳುವಿದನು ನೋಡು ॥ ೩ ॥

ಆಗ ಬ್ರಹ್ಮನು ಹೇಳಿದ್ದು—

ಶ್ಲೋ॥ ತೇಜಃ ಪರಂ ತೇಜಸೈವ ತಪಸಾಚ ತಪಸ್ತಥಾ; । ಪ್ರಶಾಮ್ಯತ್ಯಮರಾ ತಸ್ಮಾಚ್ಛೃಣುಧ್ವಂ ವಚನಂ ಮಮ ॥ —(ಮಾ. ಪು)

ಅ॥ ಹೆ ದೇವತೆಗಳಿರಾ, ತೇಜಸ್ಸು ತೇಜಸ್ಸಿನಿಂದಲೂ ತಪಸ್ಸು ತಪಸ್ಸಿನಿಂದಲೂ ಶಾಂತವಾಗುವದು. ಆದ್ದರಿಂದ ನನ್ನ ಮಾತು ಕೇಳಿ.

ಈ ಕಾಲಕ್ಕೆ ನಮಗೆ ಅತ್ರಿಮಹರ್ಷಿಗಳ ಪತ್ನಿಯಾದ ಅನಸೂಯಾದೇವಿಯೇ ನಮಗೆ ಶರಣ್ಯಳಾಗಿರುವಳು. ಆಕೆಯ ಶೀಲವನ್ನೇನು ಹೇಳಲಿ !

ಸೀ॥ ಪತಿಪಾದಮಾಹಾತ್ಮ್ಯದಲ್ಲಿ ತೋರುವ ಪ್ರೀತಿ ;-ಪತಿಯ ಸೌಂದರ್ಯದಲ್ಲಿರುವ ಪ್ರೀತಿ; ಪತಿಯ ಪೂಜೆಯ ಮಾಡುವದರಲ್ಲಿರುವ ಪ್ರೀತಿ ;-ಪತಿಯನ್ನೆ ಧ್ಯಾನಿಸುತ್ತಿರ್ಪ ಪ್ರೀತಿ ; । ಪತಿಸೇವೆಯೊಳು ತತ್ಪರತೆಯಾಗಿರುವ ಪ್ರೀತಿ; –ಪತಿಯ ಗೆಳತನವನ್ನು ಗೈವ ಪ್ರೀತಿ ;। ಪತಿಯಲ್ಲಿ ವಾತ್ಸಲ್ಯವನ್ನು ತೋರುವ ಪ್ರೀತಿ ;-ಪತಿಯೆ ಸರ್ವಸ್ವವೆಂದೆಂಬ ಪ್ರೀತಿ ; ॥ ಪತಿಗೆ ತನ್ನನು ನಿವೇದಿಸುವ ಪ್ರೀತಿ ;। ಪತಿಯಲ್ಲಿ ತನ್ಮಯತೆಯಪ್ಪ ಪ್ರೀತಿ ; । ಪತಿಯಗಲಿಕೆಯ ಸಹಿಸದಿರ್ಪ ಪ್ರೀತಿ ;। ಪತಿವ್ರತೆಯು ಜಗದಿ ತಾನಿರ್ಪ ರೀತಿ ॥ —(ಕ. ಸಂ)

ಆಕೆಯು ಶ್ರೀರಾಮಚಂದ್ರನ ಪತ್ನಿಯಾದ ಸೀತಾದೇವಿಗೆ ಕೂಡ ಆಶೀರ್ವಾದ ಮಾಡಿದವ

ಳೆಂದು ಹೆಸರುಗೊಂಡಿದ್ದಾಳೆ. ಅವಳು ಮಾಡಿದ ಆಶೀರ್ವಾದವೇನೆಂದರೆ—

ಶ್ಲೋ|| ನ ತ್ಯಕ್ಷ್ಯತೇಽಂಗರಾಗೇಣ ಶೋಭಾ ತ್ವಾಂ ಕಮಲಾನನೇ; | ಪಾತಿವ್ರತ್ಯಂ ಪುರಸ್ಕೃತ್ಯ ರಾಮಮನ್ವೇಹಿ ಜಾನಕಿ || —(ಅ.ರಾ)

ಅ|| ಹೆ, ಸೀತಾದೇವಿ, ಈ ಅರಿಸಿನಕುಂಕುಮಗಳಿಂದ ನಿನ್ನ ಕಾಂತಿಯು ಎಂದೂ ಕುಂದದೆ ಇರುವದು. ಹೆ ಜಾನಕಿ, ಪಾತಿವ್ರತ್ಯಗುಣವುಳ್ಳವಳಾಗಿ ರಾಮನ ಹಿಂದೆ ಹೋಗಿ ಬಾ.

ಆಗ ಎಲ್ಲರೂ ಕೂಡಿ ಅನಸೂಯೆ ಇರುವ ಆಶ್ರಮಕ್ಕೆ ಬರುತ್ತಿರುವಾಗ—

ಭಾ|| ದನದ ಕರು ಹುಲಿಮೊಲೆಯ ಸೇಪಿವು | ದನುನಯದಿ ಮುಂಗುಸಿಯು ಹಾವನು | ಮನೆಗೆ ಕರೆದಾತಿಥ್ಯಮಾಳ್ಪುದು; ಬೆಕ್ಕು ಇಲಿಗಳನು || ವಿನಯದಿಂದಾಡಿಸುವದೈ; ಪ | ತ್ತನಿತು ಮೃಗಪಕ್ಷಿಗಳು ಜಾತಿಯ | ಗುಣವ ಬಿಟ್ಟಾರಾಮದಿಂದಲಿಯಿದ್ದವಾಶ್ರಮದಿ || —(ಕ. ಗು. ಚ)

ಟಿ|| ಆರಾಮದಿಂದಲಿ—ಹಾಯಾಗಿ.

ಅವರೆಲ್ಲರೂ ಬಂದು ಒಡನೆ ನಮಸ್ಕರಿಸುತ್ತಿರೇ ಅನಸೂಯೆ ಅದಕ್ಕೆ ತಾನು ಅನರ್ಹಳೆಂದಾಗ ಅವರು ಹೇಳಿದ್ದು—

ಶ್ಲೋ|| ವದನಂ ಪ್ರಸಾದಸದನಮ್; | ಸದಯಂ ಹೃದಯಂ; ಸುಧಾಮುಚೋ ವಾಚಃ; || ಕರಣಂ ಪರೋಪಕರಣಮ್; | ಯೇಷಾಂ ಕೇಷಾಂ ನ ತೇ ವಂದ್ಯಾಃ! || —(ಸು.)

ಅ|| ಯಾರ ಮುಖವು ಪ್ರಸನ್ನತೆಗೆ ತೌರುಮನೆಯಾಗಿದೆಯೊ ಯಾರ ಹೃದಯದಿಂದ ಮಧುರವಾದ ಮಾತು ಹೊರಡುತ್ತದೊ ಯಾರ ಇಂದ್ರಿಯಗಳು ಪರೋಪಕಾರವನ್ನು ಮಾಡುವವೊ ಅಂಥವರು ಯಾರಿಗೆತಾನೇ ಪೂಜ್ಯರಲ್ಲ!

ಅವರಿಗೆ ಅನಸೂಯೆಯು ಉಪಚಾರ ಹೇಳಿದ್ದು—

ಶ್ಲೋ|| ಸುಜನಂ ವ್ಯಜನಂ ಮನ್ಯೇ ಚಾರುವಂಶಸಮುದ್ಭವಮ್ | ಆತ್ಮಾನಂ ಚ ಪರಿಭ್ರಾಮ್ಯ ಪರತಾಪನಿವಾರಣಮ್ || —(ಸು.)

ಅ|| ಸಜ್ಜನರು ಬೀಸಣಿಗೆಯಂತೆ ಎಂದು ತಿಳಿಯುತ್ತೇನೆ. ಬೀಸಣಿಗೆಯು ಒಳ್ಳೆ ಬಿದಿರಿನಿಂದಾಗಿ ತಾನು ತಿರುಗುತ್ತ ಮತ್ತೊಬ್ಬರ ತಾಪವನ್ನು ಕಳೆಯುವದು. ಸಜ್ಜನರು ಒಳ್ಳೆ ವಂಶದಲ್ಲಿ ಹುಟ್ಟಿ ತಾವು ತಿರುಗುತ್ತ ಮತ್ತೊಬ್ಬರ ತಾಪವನ್ನು ಕಳೆಯುವರು.

ಆಗ ಅವರು ಅನಸೂಯೆಯನ್ನು ಪ್ರಾರ್ಥಿಸಿದ್ದು—

ಆನಂದಭೈರವಿ—ರೂಪಕ

ಕಾವುದೆಮ್ಮ | ನೀನು ಕರುಣದಿ || ಪ || ಅನಸೂಯೆ ದೇವಿ || ಅ. ಪ || ಪರಮಪತಿವ್ರತೆಯು ನೀನು; | ಪಿರಿದಪ್ಪುದು ನಿನ್ನ ಮಹಿಮೆ; || ಶರಣೆಂಬೆವು ನಿನಗೆ ನಾವು; | ಪರಮಾದರದಿಂದೀಗ || ೧ || ನಿನ್ನ ಮಹಿಮೆಗೀಗ ಜಗದೊ | ಳಿನ್ನು ಸರಿಯ ಕಾಣೆವಮ್ಮ; || ಸನ್ನುತಾಂಗಿ, ಸಕಲಗುಣಸಂ | ಪನ್ನೆಯೆಮ್ಮ ಮೊರೆಯ ಲಾಲಿಸು || ೨ || ಪತಿವ್ರತೆಯರು ಪರಮಾತ್ಮನ | ಅತಿಶಯವಹ ಶಕ್ತಿ

ರೂಪರು ; || ಕ್ಷಿತಿಯೊಳಿಲ್ಲ ನಿಮ್ಮಂದದ | ಸತಿಯರಿಗಿನ್ನೇನಸಾಧ್ಯ? || ೩ ||

ಆಗ ಅನುಸೂಯೆಯು ಅವರ ಅಭಿಪ್ರಾಯವನ್ನರಿತು ಕೌಶಿಕನ ಪತ್ನಿಯ ಬಳಿಗೆ ಬಂದು ಹೇಳಿದ್ದು —

ಕಂ|| ಅಳಿಯುದಿರ್ಪನು ಗಂಡ | ನಿಳೆಯೊಳೇನಿನ್ನು ರವಿ | ಬೆಳಗುವಂದದಿ ಮಾಡು ಗಗನದಲ್ಲಿ ; || ಕಳೆಗೆಟ್ಟು ಧರೆಯೆಲ್ಲ ತೊಳಲುತಿರ್ಪುದ ನೋಡು ; | ಒಳಲಿ ಕಂಗೆಟ್ಟು ನೆರೆದಿರುವರಿಲ್ಲ ||

ಎಂದಾಕೆಯನ್ನೊಪ್ಪಿಸಿ ಅನಸೂಯೆಯು ಸೂರ್ಯನನ್ನು ಕರೆದದ್ದು —

ಶ|| ತರಣಿಯೆ, ನೀನು | ಮರೆಯೊಳಗಿರುತಲಿ | ಕೊರಗಿದೆಯಲ್ಲವೆ? ಬಾ, ಬಾ, ಬಾ, || ಭರದೊಳು ಪೂರ್ವದ | ಗಿರಿಯನೇರಿ ಬಹು ಮೆರುಗನು ತೋರುತ ಬಾ, ಬಾ, ಬಾ ||

ಒಡನೆ ಝಗ್ಗೆಂದು ಸೂರ್ಯೋದಯವಾಗುತ್ತಲೇ ಪ್ರತಿಯೊಬ್ಬರೂ ಸೂರ್ಯನನ್ನು ವಂದಿಸಿದ್ದು—

ಶ್ಲೋ|| ಬ್ರಹ್ಮಾಂಡಸಂಪುಟಕಲೇವರಮಧ್ಯವರ್ತಿ | ಚೈತನ್ಯಪಿಂಡಮಿವ ಮಂಡಲಮಸ್ತಿ ಯಸ್ಯ || ಆಲೋಕಿತೋऽಪಿ ದುರಿತಾನಿ ನಿಹಂತಿ ಯಸ್ತಮ್ | ಮಾರ್ತಂಡಮಾದಿಪುರುಷಂ ಪ್ರಣಮಾಮಿ ನಿತ್ಯಮ್ || —(ಸು)

ಅ|| ಬ್ರಹ್ಮಾಂಡಸಂಪುಟವೆಂಬ ಶರೀರದ ನಡುವೆ ಚೈತನ್ಯದ ಪಿಂಡವಾಗಿರುವ ಮಂಡಲವುಳ್ಳವನಾಗಿಯೂ ನೋಡಿದಮಾತ್ರದಿಂದಲೆ ಪಾಪವನ್ನು ಕಳೆಯುವನಾಗಿಯೂ ಇರುವ ಆದಿಪುರುಷನಾದ ಸೂರ್ಯನನ್ನು ಯಾವಾಗಲೂ ವಂದಿಸುತ್ತೇನೆ.

ಸೂರ್ಯನು ಹುಟ್ಟಿದೊಡನೆ—

ಭೋ|| ನೋಡುತಿರಲು ಜನವು, ಪಿಪ್ರ | ನಾಡುತಾಡುತಿರಲು, ಮುಖವು | ಬಾಡಿ ಬಾಡಿ ಕಾಂತಿಗೆಟ್ಟು ಕಪ್ಪಗಾಯಿತು ; || ಪಾಡನಳಿಯುತಾಗ ಕಣ್ಣು | ಗೂಡು ಬೆಳ್ಳಗಾಗಲೊಡನೆ | ನಾಡೆ ನಾಯಲಂಗವೆಲ್ಲ ತಣ್ಣಗಾಯಿತು ||

ತತ್ಕ್ಷಣದಲ್ಲಿಯೇ ಅನಸೂಯೆ ಹೇಳಿದ್ದು—

ಸಾಂ|| ಎಲೆ ಕೌಶಿಕಭೂಸುರ, ನೀನು ಜೀವಿಸು | ನೆಲದೊಳೆನ್ನಯ ಮಾತಿ ನಿಂದೆ ; || ಬಲಿದ ಪಾತಿವ್ರತ್ಯಮಿದೊರ್ಡೆನ್ನೊಳಗೆನ್ನ | ಬಳಿ ಬರಗೊಡದಿರು ನಿಂದೆ ||

ಹೀಗೆನ್ನುತ್ತಲೆ—

ಶ್ಲೋ|| ತತೋ ವಿಪ್ರಸ್ಸಮುತ್ತಸ್ಥೌ ವ್ಯಾಧಿಮುಕ್ತಃ ಪುನರ್ಯುವಾ —(ಮಾ. ಪು)

ಅ|| ರೋಗಿಯಾದವನು ಆರೋಗ್ಯವನ್ನು ಹೊಂದಿ ಪ್ರಾಯದವನಾಗಿ ಏಳುವಂತೆ ಆಗ ಆ ಕೌಶಿಕನು ಎದ್ದು ಕುಳಿತನು.

ಆಗ ಆಕೆಯ ಪ್ರಭಾವಕ್ಕೆ ಮೆಚ್ಚಿ ತ್ರಿಮೂರ್ತಿಗಳು ಪ್ರತ್ಯಕ್ಷವಾಗಿ ವರವನ್ನು ಬೇಡೆನ್ನಲು ಅನಸೂಯೆ ಕೇಳಿದ್ದು—

ಶ್ಲೋ|| ವರದಾ, ವರಯೋಗ್ಯಾ ಚ ಯದ್ಯಹಂ ಭವತಾಂ ಮತಾ | ತದ್ಯಾಂತು ಮಮ ಪುತ್ರತ್ವಂ ಬ್ರಹ್ಮವಿಷ್ಣುಮಹೇಶ್ವರಾಃ || —(ಮಾ. ಪು)

ಅ॥ ವರವನ್ನು ಕೊಡುವವರೆ, ನಾನು ವರಕ್ಕೆ ಯೋಗ್ಯಳೆಂದು ನಿಮ್ಮಭಿಪ್ರಾಯವಾದರೆ ಬ್ರಹ್ಮವಿಷ್ಣುಮಹೇಶ್ವರರು ನನ್ನ ಮಕ್ಕಳಾಗಲಿ.

ತ್ರಿಮೂರ್ತಿಗಳು ಅದಕ್ಕೊಪ್ಪಿದರು. ಆಮೇಲೆ—

ಕಂ॥ ಪರಮೇಷ್ಠಿಯಂಶದಿಂ ಹಿಮ । ಕರನಾ, ಪರಮೇಶಸಂಶದಿಂ ದೂರ್ವಾಸಂ, ॥ ಹರಿಯಂಶದಿ ದತ್ತಂ, ಬಂ । ದಿರುತೊಪ್ಪಿದರಸಳ ಗರ್ಭದೊಳ್ ಸಮ್ಮುದದಿಂ ॥

ಆಗ ಅತ್ರಿಋಷಿಗಳು ಬಂದು ನೋಡಿ ಜ್ಞಾನದೃಷ್ಟಿಯಿಂದೆಲ್ಲವನ್ನೂ ತಿಳಿದು ಆಶ್ಚರ್ಯಗೊಂಡು ತಮಗೆ ಜಗತ್ಕಾರಣನಾದ ಪರಮಾತ್ಮನ ಲಾಭವಾಗಬೇಕೆಂದಿರುವಾಗ ತ್ರಿಮೂರ್ತಿಗಳು ಲಾಭವಾಗಿರುವದರಲ್ಲಿ ಹೇಗೆ ಸಂತುಷ್ಟರಾಗಬೇಕೆಂದು ಮನಸ್ಸಿನಲ್ಲಿ ಕಲ್ಪನೆಯನ್ನು ತಂದುಕೊಂಡ ಅತ್ರಿಗಳಿಗೆ ತ್ರಿಮೂರ್ತಿಗಳು ಬಂದು ಹೇಳಿದ್ದು—

ಶ್ಲೋ॥ ಯಥಾ ಕೃತಸ್ತೇ ಸಂಕಲ್ಪೋ ಭಾವ್ಯಂ ತೇನೈವ ನಾನ್ಯಥಾ ।
ಸತ್ಸಂಕಲ್ಪಸ್ಯ ತೇ ಬ್ರಹ್ಮನ್ಯದ್ವೈ ಧ್ಯಾಯತಿ ತೇ ವಯಮ್ ॥ —(ಸಂ. ಭಾಗ)

ಅ॥ ಬ್ರಾಹ್ಮಣಶ್ರೇಷ್ಠನೆ, ನಿನ್ನ ಸಂಕಲ್ಪವು ಹೇಗೆ ಇತ್ತೋ ಈಗಲೂ ಹಾಗೆಯೇ ಭಾವಿಸಬೇಕು. ಬೇರೆ ಇಲ್ಲ. ಸತ್ಸಂಕಲ್ಪನಾದ ನೀನು ಯಾವದನ್ನು ಧ್ಯಾನ ಮಾಡುತ್ತೀಯೋ ನಾವು ಮೂವರೂ ಅದೇ (ನಾವು ಬೇರೆ ಬೇರೆಯಲ್ಲವೆಂದರ್ಥ).

ಆಗ ಅತ್ರಿಋಷಿಗಳೂ ಕೃತಾರ್ಥರಾಗಿದ್ದಾರೆ. ಅನುಸೂಯೆಯ ಈ ಪ್ರಭಾವವನ್ನು ನೋಡಿಯೇ ಸ್ತ್ರೀಯರೆಲ್ಲರೂ ಈಕೆಯ ಮೇಲುಪಙ್ಕ್ತಿಯನ್ನು ಅನುಸರಿಸಲೆಂದು ಕೀರ್ತನಾರಂಭದಲ್ಲಿ ಭಾಗವತೋತ್ತಮರು " ಸ್ತುತ್ಯವಿದಿಳೆಯೊಳಗೆ । ಪಾತಿ । ವ್ರತ್ಯವು ಸ್ತ್ರೀಯರಿಗೆ " ಎಂದು ಮೊದಲಾಗಿ ಉಪದೇಶಮಾಡಿರುವರು.

---

## ಅನಸೂಯೆಗೆ ತ್ರಿಮೂರ್ತಿಗಳು ಮಕ್ಕಳಾದ ವಿಷಯದಲ್ಲಿ ಗುರುಚರಿತ್ರೆಯೆಂಬ ಮಹಾರಾಷ್ಟ್ರಗ್ರಂಥದಲ್ಲಿರುವ ಕಥೆ

ಅನಸೂಯೆಯ ಪಾತಿವ್ರತ್ಯ ಭಾವವು ಹೆಚ್ಚಿನದೆಂದು ಕಂಡು ಇಂದ್ರನು ಅದರಿಂದ ತನಗೆಂದಾದರೂ ಅಪಾಯವಾದೀತೆಂದು ಯೋಚಿಸಿ ಅದರ ಪರಿಹಾರಕ್ಕಾಗಿ ತ್ರಿಮೂರ್ತಿಗಳಿಗೆ ಮರೆಹೊಕ್ಕನು. ತ್ರಿಮೂರ್ತಿಗಳು ಆಕೆಯ ವ್ರತಭಂಗವನ್ನು ಮಾಡುವೆವೆಂದು ಅತ್ರಿಋಷಿಗಳು ಆಶ್ರಮದಲ್ಲಿಲ್ಲದಾಗ ಭಿಕ್ಷುಕರ ವೇಷದಿಂದ ಬಂದು ಊಟಕ್ಕೆ ಕುಳಿತು ಬೆತ್ತಲೆಯಾಗಿ ಬಡಿಸಿದರೆ ಮಾತ್ರ ಉಣ್ಣುವೆವೆಂದರು. ಅನಸೂಯೆಯು ಆ ಮೂವರನ್ನೂ ಮಕ್ಕಳಂತೆ ಭಾವಿಸಿ

ಬರೀ ಮೈ ಆಗಿ ಬರುವಷ್ಟರಲ್ಲಿ ಅವರು ಅವಳ ಪಾತಿವ್ರತ್ಯಭಾವದಿಂದ ಮಕ್ಕಳೇ ಆಗಿದ್ದರು. ಅನಸೂಯೆಯು ಅವಕ್ಕೆ ಹೊಟ್ಟೆಗೆ ಕೊಟ್ಟು ಆಡಿಸುತ್ತಿರುವಾಗ ಅತ್ರಿಋಷಿಗಳು ಬಂದು ನೋಡಿ ಜ್ಞಾನದೃಷ್ಟಿಯಿಂದ ಅವರನ್ನು ತ್ರಿಮೂರ್ತಿಗಳೆಂದರಿತು ಅವರಿಗೆರಗಿದರು. ಆಗ ತ್ರಿಮೂರ್ತಿಗಳು ಪ್ರತ್ಯಕ್ಷರಾಗಿ ವರವನ್ನು ಬೇಡೆಂದರು. ಅತ್ರಿಋಷಿಗಳಿಗೆ ತಮಗೇನೂ ಬಯಕೆ ಇಲ್ಲದಿದ್ದರೂ ತಮ್ಮ ಹೆಂಡತಿಯ ಇಚ್ಛೆಯಂತೆ ತ್ರಿಮೂರ್ತಿಗಳನ್ನು ತಮ್ಮ ಮಕ್ಕಳಾಗುವಂತೆ ಕೇಳಿಕೊಂಡರು. ತ್ರಿಮೂರ್ತಿಗಳು ಆ ಮಾತಿಗೆ ಒಪ್ಪಿ ತಮ್ಮ ಅಂಶಸಂಭೂತರಾದ ಚಂದ್ರ, ದತ್ತ, ದೂರ್ವಾಸ–ಎಂಬ ಮೂವರು ಮಕ್ಕಳನ್ನು ಆ ಋಷಿದಂಪತಿಗಳಿಗೆ ಕೊಟ್ಟು ಹೋದರು. ಆಮೇಲೆ ತಮ್ಮ ಅಂಶಗಳನ್ನು ದತ್ತನಲ್ಲಿಟ್ಟು ದೂರ್ವಾಸರು ತೀರ್ಥಯಾತ್ರೆಗೂ ಚಂದ್ರನು ಚಂದ್ರಮಂಡಲಕ್ಕೂ ಹೋದರು. ಆ ದತ್ತಪ್ರಭು ಈ ರೀತಿಯಲ್ಲಿ ತ್ರಿಮೂರ್ತಿಸ್ವರೂಪನಾಗಿ ಪ್ರಪಂಚದ ಗುರುಪರಂಪರೆಗಳಿಗೆಲ್ಲ ಮೂಲಪುರುಷನಾದನು.

## ಗುರುದೇವದತ್ತ

---

## ಭಜನಾವಲಿ

೧. ಗುರು ಮಹಾರಾಜ, ಗುರು, ಜಯ ಜಯ, ಪರಬ್ರಹ್ಮ ಸದ್ಗುರು
೨. ದತ್ತಗುರು ಜಯ ದತ್ತಗುರು ದತ್ತಾತ್ರೇಯ ಗುರು ದತ್ತಗುರು
೩. ಜಯಜಯ ದತ್ತ ಗುರುಗೋವಿಂದ | ಜಯ ದತ್ತಾತ್ರೇಯ ಪರಮಾನಂದ
೪. ಜಯ ಜಯ ಶಂಕರ | ಜಯ ಗುರು ಶಂಕರ
೫. ಸಾಂಬಸದಾಶಿವ ಗಿರಿಜಾನಾಯಕ | ಮೃತ್ಯುಂಜಯ ಜಯ ಭವಭಯಹಾರಕ

## ಜಯ ಜಯ ರಘುವೀರ ಸಮರ್ಥ